ಶ್ರೀಃ

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ಜಗನ್ನಾಥದಾಸರ

## ಕೀರ್ತನೆಗಳು.

ಭಾಗ ೧.

ತೃತೀಯಾವೃತ್ತಿ

ಶ್ರೀಕೃಷ್ಣಮುದ್ರಣಾಲಯ, ಉಡುಪಿ.



1926.

ಬೆಲೆ: ೦-೧೪-೦.

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.



# ಜಗನ್ನಾಥದಾಸರ

## ಕೀರ್ತನೆಗಳು.

ಭಾಗ ೧.



ತೃತೀಯಾವೃತ್ತಿ

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1926.

ಬೆಲೆ: ೦—೧೦—೦.

# ಉಪೋದ್ಘಾತವು.

ದಾಸಕೂಟಶಿಖಾಮಣಿಗಳೆನಿಸಿ ಹರಿಕೀರ್ತನಾಮೃತದಿಂದ ಸಂಸಾರತಾಪತ್ರಯಪೀಡಿತರಾದ ಅಜ್ಞಾನಿಗಳನ್ನು ಉದ್ಧರಿಸಿದ ಈ ಜಗನ್ನಾಥದಾಸರಾಯರ ಜನ್ಮಚರಿತ್ರೆಯು ಸಕಲದುರಿತ ಪರಿಹಾರಕವೆಂದು ಗ್ರಂಥಾದಿಯಲ್ಲಿ ವಾಚಕರ ಪರಿಜ್ಞಾನಾರ್ಥವಾಗಿ ಸಂಗ್ರಹಿಸಲ್ಪಡುತ್ತದೆ.

ನೈಜಾಮ್ ಇಲಾಖಾ ಮಾನವೀಕ್ಷೇತ್ರಕ್ಕೆ ಸೇರಿದ ಬ್ಯಾಗವಟ್ಟ ಗ್ರಾಮದಲ್ಲಿ ನರ್ಸಪ್ಪನೆಂಬ ವಿಪ್ರೋತ್ತಮರು ಗ್ರಾಮಕರ್ಣಿಕರಾಗಿದ್ದು ರಾಜದ್ರವ್ಯವನ್ನು ಕೊಡಲು ಅಶಕ್ತರಾಗಿರಲು ಅಲ್ಲಿಯ ತುರುಕರಾಜನು ಕೋಪಿಸಿ ಪೆಟ್ಟುಹೊಡಿಸಲು ವಿರಕ್ತಿಯಿಂದ ಲಕ್ಷ್ಮಕ್ಕನೆಂಬ ಧರ್ಮಪತ್ನಿಯಿಂದೊಡಗೂಡಿ ಪಂಗನಾಮ ತಿಮ್ಮಣ್ಣರೆಂಬ ಹರಿದಾಸರನ್ನು ಸೇವಿಸಿ, ಅವರಿಂದ ನೃಸಿಂಹವಿಠಲನೆಂಬ ಅಂಕಿತಪಡೆದು 'ನೃಸಿಂಹದಾಸ'ರೆಂದು ಪ್ರಖ್ಯಾತರಾಗಿದ್ದರು. ಆ ದಂಪತಿಗಳಲ್ಲಿ ಶಾ. ಶ. ೧೬೫೦ನೇ ಕೀಲಕ ಸಂ॥ದ ಶ್ರಾವಣ ಶು. ೨ ದಿವಸ ಪ್ರಹ್ಲಾದರಾಯರ ಸೋದರ ಸಹ್ಲಾದರಾಯರು ಹರಿಪ್ರೇರಣೆಯಿಂದ ಶ್ರೀನಿವಾಸಪ್ಪನೆಂಬ ನಾಮಾಂಕಿತರಾಗಿ ಅವತರಿಸಿದರು. ಕಾಲದಲ್ಲಿ ಉಪನೀತರಾಗಿ ಶ್ರೀವರದೇಂದ್ರಸ್ವಾಮಿಗಳವರಲ್ಲಿ ವೇದಾಂತ ತರ್ಕಾದಿಗಳನ್ನು ಕಲಿತು ಅಸದೃಶಪಾಂಡಿತ್ಯದಿಂದ ಅಪರಿಮಿತ ಕೀರ್ತಿವಂತರಾಗಿದ್ದರು. ಇವರು ಭೃಗುಮಹರ್ಷಿಗಳ ಅಂಶರಾದ ವಿಜಯದಾಸರನ್ನು ಹಿಯ್ಯಾಳಿಸಿದ ಪಾಪದಿಂದ ಕ್ಷಯರೋಗಪೀಡಿತರಾಗಿ ಮರಳಿ ಅವರನ್ನೇ ಮರೆಹೊಕ್ಕು ಅವರ ಅಪ್ಪಣೆಯಿಂದ ಅವರ ಶಿಷ್ಯ ಗೋಪಾಲದಾಸರೆಂದು ಪ್ರಖ್ಯಾತರಾದ ಬಾಗಣ್ಣದಾಸರನ್ನು ಸೇವಿಸಿದರು. ಗೋಪಾಲದಾಸರು ಎರಡು ಭಕ್ರಿಗಳನ್ನು ಮಂತ್ರಿಸಿಕೊಡಲು ಆ ರೋಗವು ಕೂಡಲೇ ಪರಿಹಾರವಾಯಿತು. ಗುರ್ವಂತರ್ಗತ ಹರಿಪ್ರೇರಣೆಯಿಂದ ತನ್ನ ಆಯುಸ್ಸಿನಲ್ಲಿ ೪೦ ವರ್ಷ ಆಯುಸ್ಸನ್ನು ಗೋಪಾಲಪಾಸರು ಇವರಿಗೆ ಕೊಟ್ಟರು. ಆಗ ಶ್ರೀನಿವಾಸಪ್ಪನವರು ಆಶ್ಚರ್ಯಭರಿತರಾಗಿ ಗೋಪಾಲದಾಸರನ್ನು ಮಂತ್ರೋಪದೇಶಕೊಟ್ಟು ಉದ್ಧರಿಸಬೇಕೆಂದು ಬೇಡಿದರು. ಆದಕ್ಕವರು ವಾದಬೀಜವಾದ ತರ್ಕಶಾಸ್ತ್ರವನ್ನು ಬಿಡಲು ಪ್ರತಿಜ್ಞೆಮಾಡಿಸಿ, ಮಂತ್ರವನ್ನುಪದೇಶಿಸಿ, ಪಂಡರಪುರ

ವಿಟ್ಠಲನನ್ನು ಧ್ಯಾನಿಸುತ್ತ ಚಂದ್ರಭಾಗಾನದಿಯಲ್ಲಿ ಸ್ನಾನಮಾಡುತ್ತಿರುವಾಗ ತಲೆಯಮೇಲೆ ಶಿಲೆಯಲ್ಲಿ ಅಂಕಿತವು ನಮ್ಮ ಅನುಗ್ರಹದಿಂದ ಲಭಿಸುವದೆಂದು ಆಜ್ಞಾಪಿಸಿದರು. ಹಾಗೆ ಶ್ರೀನಿವಾಸಪ್ಪನವರು ಅಲ್ಲಿ ಸ್ನಾನಮಾಡುತ್ತಿದ್ದಾಗ **ಶ್ರೀಜಗನ್ನಾಥವಿಠಲನೆಂದು** ಅಂಕಿತಪಡೆದು, "ಜಗನ್ನಾಥದಾಸ"ರೆಂದು ಪ್ರಖ್ಯಾತರಾಗಿ ಅನೇಕ ಹರಿಕೀರ್ತನೆಗಳನ್ನು ಮಾಡಿದರು ಸೋದೆಯಲ್ಲಿ ಶ್ರೀವಾದಿರಾಜಪೂಜ್ಯಚರಣರನ್ನು ಸೇವಿಸಿ, ಸ್ವಪ್ನದಲ್ಲಿ ಅವರ ಅಪ್ಪಣೆಯನ್ನು ಪಡೆದು, ಬಹು ಪ್ರಮೇಯಗಳಿಂದ ಕೂಡಿದ "ಹರಿಕಥಾಮೃತಸಾರ"ವನ್ನು ಮಾಡಿದರು. ಅದಲ್ಲದೆ ವೇದಾಂತತತ್ವಗಳನ್ನೂ ಧರ್ಮರಹಸ್ಯಗಳನ್ನೂ ಶ್ರೀಪರಮಾತ್ಮನ ಗುಣಾದಿಗಳನ್ನೂ ವರ್ಣಿಸುವ ಸಹಸ್ರಾರು ದೇವರ ನಾಮಗಳನ್ನೂ ರಚಿಸಿರುತ್ತಾರೆ. ಇವರು ೧೭೩೧ನೇ ಶುಕ್ಲ ಸಂ॥ದ ಭಾದ್ರಪದ ಶು॥ ರವಿವಾರ ಮೂಲಾನಕ್ಷತ್ರ ರಾತ್ರಿ ಒಂದು ಝಾವಕ್ಕೆ ಪರಲೋಕವನ್ನು ಪಡೆದರು. ಇವರ ಜನ್ಮಭೂಮಿಯಲ್ಲಿಯೇ ಜಗನ್ನಾಥದಾಸರಾಯರ ಕಟ್ಟೆಯೆಂಬದು ಈಗಲೂ ಪ್ರಖ್ಯಾತವಾಗಿದೆ. ಅಲ್ಲಿ ತನ್ನ ಗ್ರಂಥಗಳನ್ನು ಸ್ಥಾಪಿಸಿದ್ದಾರೆಂದು ಹೇಳುತ್ತಾರೆ. ಅನೇಕರು ಇವರನ್ನಲ್ಲಿ ಸೇವಿಸಿ ತಂತಮ್ಮ ಅಭೀಷ್ಟವನ್ನು ಪಡೆಯುವರು.

ಇಂತಹ ದಾಸೋತ್ತಮರ ಕೃತಿಗಳನ್ನು ಯಥಾಶಕ್ತಿ ಸಂಗ್ರಹಿಸಿ 1919ನೆ ಇಸವಿಯಲ್ಲಿ ಛಾಪಿಸಿದ ಪ್ರಥಮಾವೃತ್ತಿಯಲ್ಲಿ ಬಹಳ ತಪ್ಪುಗಳು ಇದ್ದದ್ದರಿಂದ ಮಹನೀಯರಾದ ಮಹಾರಾಜಶ್ರೀ ನಾರಾಯಣ ರಾವ್ ಬೀಮರಾವ್ ಕಲಮದಾನಿ ಹಾವೇರಿ, ಇವರು ಆ ತಪ್ಪುಗಳನ್ನೆಲ್ಲ ತಿದ್ದಿ ಸರಿಪಡಿಸಿಕೊಟ್ಟಕ್ರಮವಾಗಿ ದ್ವಿತೀಯ ಮುದ್ರಣವನ್ನು ಬಹಳಮಟ್ಟಿಗೆ ಶುದ್ಧವಾಗಿಯೇ ಮುದ್ರಿಸಿದಂತೆ ಈ ತೃತೀಯ ಮುದ್ರಣವು ಸಾಧಿಸಲ್ಪಟ್ಟಿದೆ. ಈ ಮೂರನೆ ಮುದ್ರಣದಲ್ಲಿ ಹೊಸದಾಗಿ ದೊರೆತ ಕೆಲವು ಕೀರ್ತನೆಗಳನ್ನೂ, ನದಿಗಳ ತಾರತಮ್ಯ, ನದಿಗಳಸ್ತೋತ್ರ, ಬೃಹತ್ತಾರತಮ್ಯ. ತಂತ್ರಸಾರ ಇವರು ರಚಿಸಿರುವ ಮೂರು ಸುಳಾದಿಗಳನ್ನೂ ಸೇರಿಸಿಯದೆ.

ಉಡುಪಿ,
5—6—1926.

ಹಾವಂಜೆ ಗುರುರಾವ್,
ಪ್ರಕಾಶಕ.

# ಅನುಕ್ರಮಣಿಕೆ.


| | ಪದ. |
|---|---|
| **ಅ.** | |
| ಅಂಬಾತನಯ ಹೇರಂಬ | ೭೦ |
| ಅತಿಶೋಭಿಸುತಿದೆ | ೮೫ |
| ಅಪರಾಧವೆಣಿಸದಲೆ | ೯೯ |
| ಅಪಮೃತ್ಯು ಪರಿಹರಿಸು | ೩೨ |
| ಅರಿತವರಿಗತಿಸುಲಭ | ೧೦೬ |
| **ಆ.** | |
| ಆನನಿಮಿಷ ವಿಷ್ಣು | ೧೪೪ |
| ಆನೆಂತು ತುತಿಪೆ | ೨೧ |
| ಆವಕಾರಣವೊಗಸ | ೧೧೧ |
| ಆವಭಯವಿಲ್ಲ | ೫೩ |
| ಆ ವೇಂಕಟಗಿರಿನಿಲಯ | ೪ |
| **ಇ.** | |
| ಇಂದಿರೇ ಇಂದುವದನೇ | ೪೧ |
| ಇಂದು ನೋಡಿದೆನಂದ | ೬೬ |
| ಇದನೆ ಪಾಲಿಸು | ೪೪ |
| ಇದನೆಪಾಲಿಸು ಪಾಲಿಸೆನಗೆ | ೮೯ |
| ಇದು ನಿನಗೆ ಧರ್ಮವೇ | ೮೨ |
| ಇನಿತೆಂದು ಶಾಸ್ತ್ರ | ೧೨೩ |
| ಇರಬೇಕು ನಿಂದಕರು | ೧೩೩ |
| **ಎ** | |
| ಎಂಥಾದೋ ಶ್ರೀವೈಕುಂಠ | ೨ |
| **ಕ.** | |
| ಕಂಡೆ ಕಂಡೆ ಕೃಷ್ಣನ | ೧೩೧ |
| ಕಂಡೆ ಪಂಢರಿರಾಯನಾ | ೧೦೭ |
| ಕಂಡೆ ಪಂಢರಿರಾಯನಾ | ೨೪ |
| ಕನಕಮುನಿಕರಕಮಲ | ೫೭ |
| ಕರುಣಿಗಳೊಳಗೆಣೆ | ೬೯ |
| ಕರುಣಿಸೆನಗಿನಿತು | ೧೦೯ |
| ಕಾಯೋ ಕಾಯೋ ರಂಗ | ೨೮ |
| ಕಾವೇರಿ ಕಲುಷಾಪಹಾರಿ | ೧೩೬ |
| ಕೀಚಕಾಂತಕಭೀಮ | ೧೩೫ |
| ಕೃತಕೃತ್ಯನಾದೆನಿಂದಿನ | ೧೨೦ |
| ಕೃಷ್ಣನ ನೋಡಿರೆ | ೧೩೮ |
| ಕೃಷ್ಣದ್ವೈಪಾಯನ | ೧೧೬ |
| ಕೃಷ್ಣರಾಯನೇ ನಿನ್ನ | ೭೯ |
| ಕೊಳಲೀನು ಪುಣ್ಯವ | ೧೪೩ |
| **ಗ.** | |
| ಗತಿಯಾವುದೆನಗೆ | ೨೦ |
| ಗಿರಿರಾಜಾ ಗಿರಿರಾಜಾ | ೧೪೯ |
| ಗೋಪಾಲದಾಸರಾಯ | ೧೮ |
| **ಜ.** | |
| ಜಗದಾವ್ಯಸ್ಪೃಕ್ಷ | ೪೭ |
| ಜನನಿ ಜಾಹ್ನವಿ | ೧೨೨ |
| ಜಯಮಂಗಳಂ ನಿತ್ಯ | ೧೫೨ |
| ಜಯಮಂಗಳಂ ನಿತ್ಯ | ೧೫೩ |
| ಜಯಮಂಗಳಂ | ೧೫೪ |
| ಜಯರಾಯ ಜಯರಾಯ | ೨೫ |
| **ತ.** | |
| ತಟತ್ಕೋಟಿನಿಭಕಾಯ | ೫೧ |
| ತಾರಕವಿದು ಹರಿ | ೭ |
| ತ್ರಾಣಿ ಶ್ರೀಕೃಷ್ಣವೇಣಿ | ೧೨೬ |

| | ಪದ. |
|---|---|
| ತುತಿಸಬಲ್ಲೆನೆ ನಾ | ೧೭ |
| ತೆರಳಿದ ವ್ಯಾಸತತ್ವಜ್ಞ | ೧೨೧ |
| ತೆರಳಿದರು ವಿಜಯರಾಯರು | ೪೦ |
| **ದ.** | |
| ದಯವಾಗೊ ದಯವಾಗೋ | ೧೪೨ |
| ದಾಸರಾಯ ಪುರಂದರ | ೨೯ |
| ದಾಸೋಽಹಂ ತವ ದಾಸೋಹಂ | ೮ |
| ದ್ವಾರಪಾಲಕರಿಗಾನಮಿಪೆ | ೧೧೮ |
| **ಧ.** | |
| ಧನ್ಯನಾದೆನು ವಿಠಲನ | ೬೯ |
| **ನ.** | |
| ನಮಿಸಿ ಬೇಡುವೆ ವರ | ೫೯ |
| ನಮೋ ನಮಸ್ತೇ | ೧೨೭ |
| ನಮೋ ನಮೋ ಶ್ರೀರಾಮ | ೧೧೭ |
| ನರಸಿಂಹ ಪಾಹಿ | ೫೨ |
| ನಾರದಪ್ರಿಯ | ೭೪ |
| ನಾರಾಯಣಾದ್ರಿಕೃತವಾಸ | ೧೦೭ |
| ನಿನ್ನ ದಾಸರದಾಸ | ೫೧ |
| ನಿನ್ನ ನಂಬಿದೆ | ೧೬೯ |
| ನಿನ್ನಪರಾಧವೇನ | ೭೧ |
| ನಿನ್ನ ಸಂಕಲ್ಪಾನುಸಾರ | ೧೯ |
| ನೀಚನಲ್ಲವೆ ಇವನು | ೬೭ |
| ನೀರಜತರಂಗಿಣಿ ತೀರ | ೯೫ |
| ನೀಲಲೋಹಿತ | ೭೬ |
| ನೋಡಿದೆ ವಿಠಲನ | ೩೭ |
| **ಪ.** | |
| ಪಂಪಾಪುರನಿವಾಸ | ೭೧ |
| ಪತಿತಪಾವನನಾಮ | ೧೦೬ |
| ಪನ್ನಗಾದ್ರಿನಿವಾಸ | ೯೬ |
| ಪವಮಾನ ನಮ್ಮಗುರು | ೮೭ |

| | ಪದ. |
|---|---|
| ಪ್ರಣವಪ್ರತಿಪಾದ್ಯ | ೫೪ |
| ಪ್ರತಿಗಾಣೆ ನಿಮ್ಮ | ೧೨೫ |
| ಪಾಲಿಸೋ ಶ್ರೀಹರಿಯೇ | ೧೪ |
| ಪಾಲಿಸೆನ್ನ ಗೋಪಾಲ | ೮೦ |
| ಪಾಲಿಸೋ ಪಂಢರಿಪುರಿ | ೧೫೦ |
| ಪಾಹಿ ಮಾಂ ಪಾಹೀ | ೬೦ |
| ಪಾಹಿ ಪಂಕೇರುಹೇಕ್ಷಣ | ೧೪೫ |
| ಪ್ರಾಣದೇವ ನೀನಲ್ಲವೆ | ೭೭ |
| ಪಿಡಿಯೆನ್ನಕೈಯ್ಯ ರಂಗ | ೯೪ |
| ಪೊಂದಿ ಬದುಕಿರೋ | ೮೬ |
| **ಫ.** | |
| ಫಲವಿದು ಬಾಳ್ದುದಕೆ | ೧೫ |
| **ಬ.** | |
| ಬಂದೆ ಗುರುರಾಯ | ೧೪೮ |
| ಬಂಧನವ ಪರಿಹರಿಸು | ೧೭ |
| ಬಂದುನಿದಿರಲಿಕಸುಬಿ | ೩೬ |
| ಬಲುರಮ್ಯವಾಗಿಹುದು | ೮೪ |
| ಬಾ ವೆಂಕಟಶೈಲಾಧಿಪ | ೩೭ |
| ಬಿನ್ನೈಪೆ ನಿನಗಾನು | ೯೦ |
| ಬೆಡಗುತೋರುತಲಿಹಕೊ | ೪೮ |
| ಬೇಡಲೇತಕೋ ವರವ | ೪೯ |
| **ಭ.** | |
| ಭಾಗೀರಥ್ಯಾದಿನದಿ | ೧೬೭ |
| ಭಾರತೀಮಜ್ಜನನಿಯೇ | ೮೭ |
| ಭಾರತೀರಮಣಭವ | ೬೧ |
| ಭಾರತೀರಮಣಾ | ೩೭ |
| ಭಾರತೀರಮಣಸದ್ಭಕ್ತ | ೯೭ |
| **ಮ.** | |
| ಮಂಗಳ ಭಾರತಿ ರಮಣನಿಗೆ | ೧೫೫ |
| ಮದಮತ್ಸರವ ಬಿಡದ | ೧೦೮ |

| | ಪದ. |
|---|---|
| ಮಧ್ವಾಂತರ್ಗತ ವೇದವ್ಯಾಸಾ | ೨೮ |
| ಮಾನವೇ ಮರವರೇನೋ | ೫೬ |
| ಮಾರುತೀ ನಮ್ಮ ಗುರು | ೫ |
| ಮುಕ್ತನಲ್ಲವೆ ಭವದಿ | ೩೨ |
| ಮುರಪುರಹರಪಾಹಿ | ೯೬ |

**ಯ.**

| | |
|---|---|
| ಯತಿಕುಲಾಂಬುಜ | ೧೩೪ |
| ಯಮರಾಯ ಕೇಳ್ದ | ೧೧೩ |
| ಯಮುನೇ ದುರಿತೋಪಶಮ | ೧೧೭ |
| ಯಾತರ ಭಯ ಶ್ರೀನಾಥ | ೨೩ |
| ಯಾತರವ ನಾನಯ್ಯ | ೧೦೪ |
| ಯೆಂದು ಕಾಂಬೆನೋ | ೪೭ |

**ರ.**

| | |
|---|---|
| ರಂಗ ನಿನ್ನ ಕೊಂಡಾಡುವ | ೧೦ |
| ರತುನದೊರಕಿತಲ್ಲಾ | ೬೨ |
| ರಥವನೇರಿದ | ೧೩ |
| ರಕ್ಷಿಸೋ ಶ್ರೀಶಾ | ೨೨ |
| ರಾಘವೇಂದ್ರಯತಿಸಾರ್ವಭೌಮ | ೧೪೬ |
| ರಾಘವೇಂದ್ರರಾಜಿತ | ೫೮ |
| ರಾಮನ ನೋಡಿದ್ಯೆ | ೩೫ |
| ರಾಮಾ ರಘುಕುಲಲಲಾಮಾ | ೮೮ |
| ರಾಯಬಾರೋ ತಂದೆ | ೪೩ |
| ರುದ್ರಾಂತರ್ಗತ ನಾರಸಿಂಹ | ೫೫ |
| ರೋಗಹರನೇ | ೬೯ |

**ಲ.**

| | |
|---|---|
| ಲಂಬೋದರ ರಕ್ತಾಂಬರ | ೧ |

**ವ.**

| | |
|---|---|
| ವಂದಿಸುವೆ ಗುರುರಾಘವೇಂದ್ರ | ೧೧೯ |
| ವರದೆ ಕಾರುಣ್ಯಶರಧೇ | ೧೭೪ |
| ವಾದಿರಾಜಗುರು ನೀ | ೬ |
| ವಾದಿರಾಜ ವಾದಿರಾಜ | ೨೫ |
| ವಾರಿಜಾಸನೆ | ೪೬ |
| ವೆಂಕಟೇಶಾ ಕಾಯೋ | ೧೦೦ |
| ವ್ಯರ್ಥ ಕಳೆವರೇನೋ | ೨೬ |

**ಶ.**

| | |
|---|---|
| ಶಂಭೋ ಸುರಗಂಗಾಧರ | ೧೭೮ |
| ಶರಣು ಮೃತ್ಯುಂಜಯ | ೧೧೪ |
| ಶರಣು ವೆಂಕಟನಾಥ | ೧೦೧ |
| ಶರಣು ಶಂಕರಭೂಷಣಾ | ೯೧ |
| ಶಿವನೀನ್ಯಾಗಾದ್ಯೋ | ೬೭ |
| ಶೇಷದೇವಾ | ೬೫ |
| ಶೇಷಪರ್ಯಂಕಶಯನ | ೩ |
| ಶೋಭಾನವೆನ್ನಿರೆ | ೧೫೧ |
| ಶ್ರೀಪತಿತಲ್ಪಸರ್ಪ | ೧೦೫ |
| ಶ್ರೀನಾರಸಿಂಹ | ೧೩೭ |
| ಶ್ರೀನಿಕೇತನ ಪಾಲಯ | ೩೪ |
| ಶ್ರೀಮಧ್ವಚಿತ್ತಮಂದಿರನೆ | ೧೪೭ |
| ಶ್ರೀಮಾರುತಾತ್ಮ | ೧೪೧ |
| ಶ್ರೀರಾಘವೇಂದ್ರ ನಿಮ್ಮ | ೧೧ |
| ಶ್ರೀರಾಘವೇಂದ್ರಾ | ೧೧೫ |
| ಶ್ರೀವೆಂಕಟಾಚಲನಿವಾಸಾ | ೧೩೯ |
| ಶ್ರೀವೆಂಕಟಶೈಲಾಧಿಪ | ೯ |
| ಶ್ರೀಶಬ್ರಹ್ಮಸದಾಶಿವಾ | ೪೫ |

**ಸ.**

| | |
|---|---|
| ಸಂತರೆನಬಹುದು | ೧೧೦ |
| ಸ್ಮರಿಸಿ ತೀರ್ಥಕ್ಷೇತ್ರವಾ | ೧೪೦ |
| ಸ್ಮರಿಸು ಗುರುಸಂತತಿ | ೬೪ |
| ಸ್ಮರಿಸು ಸಂತತ ಹರಿಯನು | ೩೮ |
| ಸರ್ವಾಂತರ್ಯಾಮಿ ನೀ | ೮೧ |
| ಸಾರಿದ ಡಂಗುರ ಯಮನು | ೩೩ |

ಪದ.
ಸಿರಿರಮಣ ತವಚರಣ ೧೩೦
ಸೋಸಿ ಶಿವಶರ್ಣ ೯೨

**ಹ.**

ಹನುಮಭೀಮಾನಂದ ೩೦
ಹರಿದಾಸರಿಗೆ ಒಬ್ಬರ ೧೬
ಹಿಂದಿಲ್ಲಾ ಮುಂದು ೯೮

## ಸುಳಾದಿಗಳು.

ಪುಟ.
೧ ವರದಸುಳಾದಿ 126
೨ ಮುರಿತವನಕಂಠೀರಸುಳಾದಿ 128
೩ ಶುಭದಸುಂದರಕಾಯಸುಳಾದಿ 130

**ನದಿಗಳ ತಾರತಮ್ಯ** ... ... 99
**ತೀರ್ಥಕ್ಷೇತ್ರಸ್ತೋತ್ರ** ... ... 103
**ಬೃಹತ್ತಾರತಮ್ಯ** ... ... ... 106
**ತಂತ್ರಸಾರ** ... ... ... 114
**ಪಾಂಡುರಂಗಪಾರಿಜಾತ** ... ... 120

ಸಂಪೂರ್ಣವು.



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಜಗನ್ನಾಥದಾಸರ ಕೀರ್ತನೆಗಳು.

## ಮೊದಲನೆಯ ಭಾಗವು.

ಕಲಿಜೇಷ್ವನಿಭಾಕಾರಂ ಜಗದೀಶಪದಾಶ್ರಯಂ ।
ಜಗತೀತಲವಿಖ್ಯಾತಂ ಜಗನ್ನಾಥಗುರುಂ ಭಜೇ ॥

### ೧. ರಾಗ ಮಧ್ಯಮಾವತಿ, ಅಟತಾಳ.

ಲಂಬೋದರ ರಕ್ತಾಂಬರಧರ । ಅಂಬರಾಧೀಶ್ವರ ಗೌರೀಕುಮಾರ ॥ ॥ ಪಲ್ಲ । ಸಿಂಧುರವದನರವಿಂದ ಸುಂದರ ವಿಘ್ನಾ ॥ ಘಾಂಧಕಾರಶರಚ್ಚಂದಿರ ಧೀರಾ ॥ ೧ ॥ ವರಪಾಶಾಂಕುಶದಂತಧರ ಸುಮೋಹಕಶೂರ್ಪ॥ಕರಣ ತ್ವಚ್ಚರಣಪಂಕಜ ನಮಿಪೆ ॥ ೨ ॥ ಜಗನ್ನಾಥವಿಠಲನ ಮಗನಾಗಿ ದ್ವಾಪರ ॥ ಯುಗದಲ್ಲಿ ಜನಿಸಿದ ಸುಗುಣ ನೀ ಸಲಹೋ ॥ ೩ ॥

### ೨. ರಾಗ ಶಂಕರಾಭರಣ, ಅಟತಾಳ.

ಎಂಥಾದೋ । ಶ್ರೀವೈಕುಂಠ । ವೆಂಥಾದೋ ॥ ಪಲ್ಲ ॥ ಎಂಥಾದೋ ವೈಕುಂಠವರಣ । ಅಲ್ಲಿ । ಕಂತುಪಿತನ ದೇಹಕಿರಣ । ಅದ । ರಂತರಂಗ ಹೇಮಾಭರಣ । ಕಾಂತಿ । ಗಂತು ನಾಚಿದ ರವಿ ಅರುಣ ॥ ಆಹಾ ॥ ನಂತಕಾಲದಲ್ಲಿ ಸಂತತ ತುತಿಪರ್ಗೆ । ಪ್ರಾಂತಕ್ಕೆ ನಾಲ್ಕು ನಿಶ್ಚಿಂತ ಮುಕ್ತಿಯ ಸ್ಥಾನ ॥ ॥ ೧ ॥ ಪಾಲಾಸಾಗರಮಧ್ಯ ಕೋಟೆ । ಒಳ. । ಗೇಳು ಸುತ್ತಿನಾಗಾರ

ದಾಟಿ । ತಾಳ । ಮೇಳದವರು ಮೂರು ಕೋಟಿ । ನಾವು । ಪೇಳ್ವ ಗಾಯಕರ ಗಲಾಟೆ ॥ ಆಹ ॥ ಶೀಲಮುನಿಗಳು ದೇವಗಂಧರ್ವರು ಜೀವನ್ಮುಕ್ತರುಗಳು ಸೇರಿಪ್ಪ ಹರಿಪುರ ॥ ೨ ॥ ಹೇಮಪ್ರಾಕಾರದ ಪುರವು । ಅಲ್ಲಿ । ಆಮಹ ಬೀದಿಶೃಂಗರವು । ನೋಡೆ । ಕಾಮಧೇನು ಕಲ್ಪತರುವು । ಬಲು । ರಾಮಣೀಯವಾದ ಇರವು ॥ ಆಹ ॥ ಶ್ರೀಮೂರುತಿಯೆಂದು ವೇದಾಂತ ಶ್ರುತಿಸಾರಿ । ಆಮಹ ಮುಕ್ತರು ಸೇರಿಹ ಮಂದಿರ ॥ ೩ ॥ ಸುತ್ತಲು ಸನಕಾದಿಮುನಿಯು । ದಿವ್ಯ । ನರ್ತನ ಗಾಯನ ಧ್ವನಿಯು । ಪುಷ್ಪ । ವೃಷ್ಟಿ ಚಂಪಕಜಾಜಿ ಹನಿಯು । ಅಲ್ಲಿ । ಅಷ್ಟಮಸ್ತ್ರೀಯರ ಮನೆಯು ॥ ಆಹ ॥ ನಿತ್ಯಾವಿಯೋಗಿನಿ ಒತ್ತುತ್ತ ಪಾದಸಂ । ಪತ್ತಿಗೀಶಯನಸರ್ವೋತ್ತಮನಾ ಗೃಹ ॥ ೪ ॥ ಥಳಥಳಿಸುವ ದಿವ್ಯದ್ವಾರ । ಅಲ್ಲಿ । ಹೊಳೆವಂತ ರಂಗಮಂದಿರ । ಮುತ್ತಿ । ನೆಳೆಗಳ ಗೊಂಚಲ ಭಾರ । ಹೇಮ । ತುಳಸಿಸರದ ಶೃಂಗಾರ ॥ ಆಹ ॥ ಹೊಳೆವ ಮಾಣಿಕದ ಮಂಟಪಮಧ್ಯದೊಳ್ಮೆರೆವ । ಚೆಲುವ ಜಗನ್ನಾಥವಿಠಲನ ನಿಜಸ್ಥಾನ ॥ ೫ ॥

✓೩. ರಾಗ ಆನಂದಭೈರವಿ, ಝಂಪೆತಾಳ.

ಶೇಷಪರ್ಯಂಕ ಶಯನ । ಮನ್ಮನದ । ದೋಷವೆಣಿಸದಲೆ ಕಾಯೋ ॥ ॥ ಪಲ್ಲ ॥ ಧನ ಓದನಗಳ ಬಯಸೀ । ನೀಚೋಚ್ಚ । ರೆನದೆ ಮನೆ ಮನೆ ತಿರುಗಿದೆ ॥ ಅನಿಮಿಷೋತ್ತಂಸ ನಿನ್ನ । ಪಾದ ಪೊಂ । ದಿನ ಭಜಿಸಿದವನಲ್ಲವೋ ॥ ೧ ॥ ಭಗವಂತ ನಿನ್ನ ಗುಣವ । ವರ್ಣಿಸದೆ । ಭಗವತಿಯರ ವಯವಗಳಾ ॥ ಸೊಗಸಿನಿಂದಲಿ ವರ್ಣಿಸಿ । ಎನ್ನ ನಾ । ಲಿಗೆ ಬರಡು ಮಾಡಿಕೊಂಡೇ ॥ ೨ ॥ ಉಪರಾಗ ಪರ್ವಗಳಲಿ । ಸ್ನಾನ ಜಪ । ತಪ ಅನುಷ್ಠಾನ ಜರಿದು ॥ ನೃಪರ ಮಂದಿರವ ಕಾಯ್ದು । ಧನವ ತಂ । ದುಪಜೀವಿಸಿದೆನೊ ದೇವಾ ॥ ೩ ॥ ಗುರುಹಿರಿಯರನು ನಿಂದಿಪ । ನೀಚರನು । ಸರಿಸಿಯವರನು ತುತಿಸಿದೆ ॥ ಪೊರೆವಗೋಸುಗ ಉದರವ । ಜನರಿಂದ । ಹರಿದಾಸರೆನಿಸಿಕೊಂಡೆ ॥ ೪ ॥ ವೇದಶಾಸ್ತ್ರಾಗಮವನು । ಓದಿ ಸ । ನ್ಮೋದಬಡಗಲೆ ಕುಶಾಸ್ತ್ರ ॥ ಓದಿ ಪಂಡಿತನೆನಿಸಿದೆ । ಕೀರ್ತಿ ಸಂ । ಪಾದಿ

ಸದೆ ವ್ಯರ್ಥ ಬಾಳ್ವೇ ॥ ೫ ॥ ವೈರಾಗ್ಯ ಪುಟ್ಟಲಿಲ್ಲ । ಘೋರಸಂ । ಸಾರದೊಳು ಮಗ್ನನಾದೆ ॥ ಸೂರಿಗಳ ಮಧ್ಯದಲ್ಲಿ । ಬುಧನಂತೆ । ತೋರುತಿಹೆ ನೋಳ್ಪ ಜನಕೆ ॥ ೬ ॥ ನಾವಮಾಡ್ದ ದೋಷರಾಶಿ । ಎಣಿಸಲ್ಕೆ । ತಾವುರಸಭವಗಸದಳ ॥ ಸ್ವಾಮಿ ನೀನೊಬ್ಬಲ್ಲದೆ । ಹೊರೆವವರ । ಈಮಹಿಯೊಳೆಲ್ಯು ಕಾಣೇ ॥ ೭ ॥ ಸರ್ವಪ್ರಕಾರದಲ್ಲಿ । ಹಗಲಿರುಳು । ದುರ್ವಿಷಯಕೊಳಗಾದೆನು ॥ ಶರ್ವಾದಿವಂದ್ಯ ಚರಣಾ । ಬದುಕಿದ್ದು । ಊರ್ವಿಗೆ ಭಾರಾದೆನೋ ॥ ೮ ॥ ಭೂತಸಂಬಂಧದಿಂದ । ಬಹುವಿಧದ । ಪಾತಕವೆ ಸಮನಿಸಿದವೋ ॥ ದಾತ ಕಡೆಗೈದಿಸೊಗಡಾ । ಭವದಿ ಜಗ । ನ್ನಾಥ ವಿಟ್ಠಲ ಕೃಪಾಳೋ ॥ ೯ ॥ ಶ್ರೀ ॥

## ✓ ೪. ರಾಗ ಶಂಕರಾಭರಣ, ಆದಿತಾಳ.

ಶ್ರೀ ವೇಂಕಟಗಿರಿನಿಲಯನಂಘ್ರಿ ರಾ । ಜೀವ ಯುಗಳಿಗಾನಮಿಸುವೆನು ॥ ಸೇವಿಪ ಜನರಿಗಮರತರುವೆನಿಸಿ ಧ । ರಾವಲಯಾಖ್ಯದಿವಿಯೊಳಿಸೆವ ॥ ॥ ಪಲ್ಲ ॥ ಆವನಂಘ್ರಿಜಲ ಸಕಲಜಗತ್ತಿಗೆ । ಪಾವನಕರವೆಂದೆನಿಸುವುದು ॥ ಶ್ರೀವಿಧಿಭವಶಕ್ರಾದ್ಯಮರಾವನ । ಸೇವಕಜನರೆಂದೆನಿಸುವರು ॥ ದೇವೋತ್ತಮ ತಾನಾಗಿ ನಿಖಿಳ ಜಡ । ಜೀವ ಭಿನ್ನಕರ್ಮವ ಮಾಳ್ಪಾ ॥ ಸ್ಥಾವರ ಜಂಗಮದೊಳಗೆ ನಿಂತು ವೇ । ದಾವಳಿಯಿಂದ ತುತಿಸಿಕೊಂಬ ॥ ೧ ॥ ವಾತನೊಳಹಿಪವಿರೋಧಿ ಶಾತನ ಸ । ತ್ವಾತಿಶಯವ ತೋರೆನಲಾಗ ॥ ಜಾತರೂಪಶೈಲಾತ್ಮಜನಪ್ಪಿರೆ । ವೀತಿಹೋತ್ರಸಖಕಿತ್ತೊಗಿಯೋ ॥ ವೀತಕರ್ಣನಳವಳಿದು ಸ್ತುತಿಸಲು ನಿ । ಕೇತನತ್ರಯದೊಳುಳುಹಿ ಬೇಗ ॥ ಧಾತಮಹಿಳೆ ತೀರ್ಥದಿ ಭೂಲಕ್ಷ್ಮೀಶ । ಮೇತನಾಗಿ ಮೋದಿಸುತಿಪ್ಪ ॥ ೨ ॥ ವೃದ್ಧಭೂಸುರನ ಪೈದು ಸಲಿಲದೊ । ಳದ್ದಿ ಕುಮಾರತ್ವವನಿತ್ತ ॥ ಅಧ್ವರವೆಸಗಿದ ಋಷಿಗಳ ಮಂತ್ರದ । ಬದ್ಧ ತಿದ್ದಿ ಮುಖವನು ಗೈದ ॥ ಮಧ್ಯರಾತ್ರಿಯೊಳ್ಬೆಸಗೊಂಡ ನೃಪನ ಉಪದ್ರವ ಕಳದಾಯುಧವಿತ್ತ ॥ ಪೃದ್ಭಾಂಡವ ರಚಿಸುವನಿಗೊಲಿದವನ । ಚೋದ್ಯ ತೊಂಡಮಾನಗೆ ತೋರ್ದ ॥ ೩ ॥ ಭೂಸುರನೋರ್ವನು ತೊಂಡಮಾನ ಧರ । ಣೀಶನ ನಿಲಯದಿರಿಸಿ ಸತಿಯು ॥ ಕಾಶಿಗೆ

ಪೋಗಲು ನೃಪತಿ ಮರೆಯೆ ನಿ। ಶ್ವಾಸವನ್ನೈದಿದಳಾ ಸತಿಯು॥ ಆಸಮ ಯದಿ ದ್ವಿಜವರ್ಯನು ಬೆಸಗೊಳೆ। ಕ್ಲೇಶದಿ ಭೂಮಿಪ ಸಂಸ್ತುತಿಸೆ॥ ಕೇಶವ ತಾನಸ್ಥಿಗಳ ತರಿಸಿ ಸು। ವಾಸಿನಿ ಶಿಶುಸಹ ವಲಿದಿತ್ತಾ॥ ೪॥ ಮನೋವಾಕ್ಕಾಯದಿ ಕರ್ಮಜನ್ಯಫಲ। ದಿನದಿನಗಳಲಿ ಸಮರ್ಪಿಸುವ॥ ಮನುಜೋತ್ತಮರಾ ಆಧಿವ್ಯಾಧಿದು। ರ್ಜನ್ಮಗಳೆಲ್ಲವ ಪರಿಹರಿಪ॥ ಘನತರ ಬಗಲಭ್ಯನು ಕುವಲಯದೊಳು ಕಾ। ರುಣಿಕ ಧರ್ಮಕರ್ಮಾರ್ಥಗಳ॥ ಜನ ರಿಗೆ ಸಲಿಸುವ ಜಗನ್ನಾಥವಿಠ್ಠಲ। ಮನೆಮಾಡಿ ತಾ ಶೇಷಾಚಲವ॥ ೫॥

## ೫. ರಾಗ ಶಂಕರಾಭರಣ, ಅಟತಾಳ.

ಮಾರುತೀ। ನಮ್ಮ ಗುರು। ಮಾರುತೀ॥ ಪಲ್ಲ॥ ಮಾರುತಿ ಕರುಣಿಸು ಜ್ಞಾನಾ। ಎನ್ನ। ಸೇರಿದ ಸತತ ಅಜ್ಞಾನಾ॥ ಆಹ॥ ದೂರ ಓಡಿಸಿ ಹರಿ ಆರಾಧನೆಯಿತ್ತು। ತೋರಿಸು ಪಥ ಸರ್ವಾಧಾರಾ ಉದಾರನೇ॥ ಅನು ಪಲ್ಲ॥ ದ್ವಿತಿಯ ಯುಗದಲವತರಿಸಿ। ಸೀತಾ। ಪತಿಯ ಪಾದಕೆ ನಮ ಸ್ಕರಿಸಿ। ಅಬ್ಧಿ। ಅತಿವೇಗದಿಂದ ಉತ್ತರಿಸಿ। ರವಿ। ಸುತಗೊಲಿದವನ ನುದ್ಧರಿಸಿ॥ ಆಹ॥ ಕ್ಷಿತಿಜೆದೇವಿಯನ್ನು ಸ್ತುತಿಸಿ ಮುದ್ರಿಕೆಯಿತ್ತು। ದಿತಿ ಜರ ಸದೆದ ಭಾರತಿದೇವಿರಮಣನೇ॥ ೧॥ ಕುರುಕುಲದಲ್ಲಿ ಉದ್ಭವಿಸಿ। ಬಹು। ಗರಳಪದಾರ್ಥವ ಸಲಿಸಿ। ಚೆಲ್ವ। ತರುಣಿರೂಪವನೆ ಶೃಂಗರಿಸಿ। ನೀಚ। ತರ ಕೀಚಕನ್ನ ಸಂಹರಿಸಿ॥ ಆಹ॥ ಜರೆಯ ಸುತನ ಸೀಳ್ದು ಧರಣಿಪಾಲಕರನ್ನು। ಸೆರೆಯ ಬಿಡಿಸಿ ಕಾಯ್ದ ಪರಮ ಸಮರ್ಥನೇ॥ ೨॥ ಭೂತಳದೊಳಗೆ ಯತೀಯ। ರೂಪ। ನೀ ತಾಳಿದಿಯೊ ಶುಭಕಾಯ। ಮಾಯಿ। ವ್ರಾತ ಗೆಲಿದ್ಯೋ ಮಧ್ವರಾಯ। ಕಾಯ। ಜಾತಜನಕನತಿ ಪ್ರೀಯ॥ ಆಹ॥ ಭೂತನಾಥನೆ ಪರಮಾತುಮನೆಂಬ। ಪಾತಕರರಿ ಜಗನ್ನಾಥವಿಠಲ ದೂತಾ॥ ೩॥

## ೬. ರಾಗ ನಾಟಿ, ಆದಿತಾಳ.

ವಾದಿರಾಜಗುರು ನೀ ದಯಮಾಡದೇ। ಈ ದುರಿತಗಳ ನಿವಾರಿಪ ರಾರೋ॥ ಪಲ್ಲ॥ ದೇಶಿಕಾರ್ಯ ವಾಗೀಶಕುವರ ತವ। ದಾಸಸಮೂಹವ

ನೀ ಸಲಹೋ ಸದಾ ॥ ೧ ॥ ನೀ ಗತಿಯೆಂದನುರಾಗದಿ ನಂಬಿದ ॥ ಭೋಗ ಪುರೀಶನ ರೋಗವ ಕಳದೆ ॥ ೨ ॥ ಕಲಿಬಾಧೆಯು ವೆಗ್ಗಳವಾಯಿತು ಎಂ । ದಿಳೆಗಿಳಿದ್ಯತಿಕುಲತಿಲಕ ಕೃಪಾಳೋ ॥ ೩ ॥ ಜನ್ಮಾಧಿವ್ಯಾಧ್ಯುನ್ಮಾದ ವಿಭ್ರಮುಗಳು । ನಿಮ್ಮೊರೆಹೊಕ್ಕಮೇಲಿನ್ನಿರಲುಂಟೇ ॥ ೪ ॥ ಮೋದಮುನಿ ಮತಮಹೋದಧಿಚಂದ್ರ ಪೂ । ರ್ಣೋದಯುಶರಣರ ಕಾದುಕೊ ಘೊರಿಯೋ ॥ ೫ ॥ ನಿನ್ನೊಳಶನಾದ ಜಗನ್ನಾಥವಿಠಲನ । ಇನ್ನಾದರೂ ತೋರೆನ್ನ ಮನದಲೀ ॥ ೬ ॥ ಶ್ರೀಃ ॥

## ೭. ರಾಗ ಪಂತುವರಾಳಿ, ರೂಪಕತಾಳ.

ತಾರಕವಿದು ಹರಿಕಥಾಮೃತ । ಸಾರಜನಕೆ ॥ ಪಲ್ಲ ॥ ಘೋರತರ ಅಪಾರ ಸಂ । ಸಾರವೆಂಬ ನವಶರಧಿಗೆ ॥ ಅನುಪಲ್ಲ ॥ ಶ್ವಾನಸೂಕರಾದಿ ನೀಚ । ಯೋನಿಗಳಲಿ ಬಂದು ನೊಂದು ॥ ವೈನತೇಯವಾಹನ ಸನ್ನಿ । ಧಾನಬೇಕು ಯೆಂಬವರಿಗೆ ॥ ೧ ॥ ಪ್ರಿಯವಸ್ತುಗಳೊಳು ಪಾಂಡ । ವೇಯಸಖನೆ ಯೆಮಗೆ ಬ್ರಹ್ಮ ॥ ವಾಯು ಉಚ್ಚಸುರರು ತಂದೆ । ತಾಯಿಯೆಂದರಿತವರಿಗೆ ॥ ೨ ॥ ಶ್ರೀಮುಕುಂದ ಸರ್ವ ಮಮ । ಸ್ವಾಮಿ ಅಂತರಾತ್ಮ ಪರಂ । ಧಾಮ ದೀನಬಂಧು ಪುಣ್ಯ । ನಾಮವೆಂದರಿತವರಿಗೆ ॥ ೩ ॥ ಜ್ಞೇಯ ಜ್ಞಾನಜ್ಞಾತೃ ಬಾದ । ರಾಯಣಾಖ್ಯ ಹರಿಯ ವಚನ ॥ ಕಾಯ ಮನದಿ ಮಾಡ್ಡ ಕರ್ಮ । ಶ್ರೀಯರಸನೀಗೀವ ನರಗೆ ॥ ೪ ॥ ಭೂತಭವ್ಯ ಭವ ತ್ಪ್ರಭು ಅ । ನಾಥಜನರ ಬಂಧು ಜಗ ॥ ನ್ನಾಥವಿಠಲ ಪಾಹಿಯೆಂದು । ಮಾತುಮಾತಿಗೆಂಬುವರಿಗೆ ॥ ೫ ॥ ಶ್ರೀಃ ॥

## ೮. ರಾಗ ಪೂರ್ವಿ, ಆದಿತಾಳ.

ದಾಸೋಽಹಂ ತವ ದಾಸೋಽಹಂ ತವ । ದಾಸೋಽಹಂ ತವ ದಾಸೋಽಹಂ ॥ ವಾಸುದೇವ ವಿಗತಾಘಸಂಘ ತವ ॥ ಪಲ್ಲ ॥ ಜೀವಾಂತರ್ಗತ ಜೀವನಿಯಾಮಕ । ಜೀವವಿಲಕ್ಷಣ ಜೀವನದ ॥ ಜೀವಾಧಾರಕ ಜೀವ ರೂಪ ರಾ । ಜೀವಭವಜನಕ ಜೀವೇಶ್ವರ ತವ ॥ ೧ ॥ ಕರ್ಮಾಕರ್ಮ ಕೃತ

ಕರ್ಮಕೃತಾಗಮ । ಕರ್ಮಫಲಪ್ರದ ಕರ್ಮಜಿತ ॥ ಕರ್ಮಬಂಧಮಹ ಕರ್ಮವಿಮೋಚಕ । ಕರ್ಮವಿಗ್ರಹ ವಿಕರ್ಮನಾಶ ತವ ॥ ೨ ॥ ಕಾಲಾಹ್ವಯ ಮಹಕಾಲನಿಯಾಮಕ । ಕಾಲಾತೀತ ತ್ರಿಕಾಲಜ್ಞ ॥ ಕಾಲಪ್ರವರ್ತಕ ಕಾಲನಿವರ್ತಕ । ಕಾಲೋತ್ಪಾದಕ ಕಾಲಮೂರ್ತಿ ತವ ॥ ೩ ॥ ಧರ್ಮಯೂಪ ಮಹಧರ್ಮವಿವರ್ಧನ । ಧರ್ಮವಿದುತ್ತಮ ಧರ್ಮನಿಧೇ ॥ ಧರ್ಮಸೂಕ್ಷ್ಮ ಮಹಧರ್ಮಸಂರಕ್ಷಕ । ಧರ್ಮಸಾಕ್ಷಿಯ ಮಧರ್ಮಮಿತ್ರ ತವ ॥ ೪ ॥ ಮಂತ್ರಯಂತ್ರಮಯ ಮಂತ್ರಬೀಜ ಮಹಾ । ಮಂತ್ರರಾಜ ಗುರುಮಂತ್ರಜಿತಾ ॥ ಮಂತ್ರಮೇಯ ಗುರುಮಂತ್ರಗಮ್ಯ ವರ । ಮಂತ್ರ ದೇವ ಜಗನ್ನಾಥವಿಠಲ ತವ ॥ ೫ ॥ ಶ್ರೀಃ ॥

## ೯. ರಾಗ ಪೂರ್ವಿ, ಆದಿತಾಳ.

ಶ್ರೀವೆಂಕಟಶೈಲಾಧಿಪ ನಮೋ ರಾ । ಜೀವಭವಭವಾರಾಧ್ಯ ನಮೋ ॥
ಭೂವರಹಾದ್ಯವತಾರ ನಮೋ ನಮೊ । ಭೂವೈಕುಂಠವಿಹಾರ ನಮೋ ॥
ಕೇವಲನಿರ್ಗುಣಬೋಧಾನಂದಮ । ಯಾವತಾರ ತೇ ನಮೋ ನಮೋ ॥
ಗೋವಿಂದ ಜಗಜ್ಜೀವನ ಜಿತಮದ । ದೇವಕಿನಂದನ ದೇವ ನಮೋ ॥ ೧ ॥
ಸ್ವಾಂತಧ್ವಾಂತನಿಕೃಂತನ ಕಮಲಾಕಾಂತ ಶ್ರೀಮಹಾನಂತ ನಮೋ ॥
ಚಿಂತಿತಫಲದ ಮದಂತರ್ಯಾಮಿ ದು । ರಂತಶಕ್ತಿ ಜಯವಂತ ನಮೋ ॥
ದಂತಿವರವರದಾಚಿಂತ್ಯಮಹಿಮ ಸ । ತ್ಪಾಂಥಜನಾಪ್ತ ಮಹಾಂತ ನಮೋ ।
ಸಂತತಾದಿಮಧ್ಯಾಂತವಿವರ್ಜಿತಾ । ನಂತಾಸನ ಸಕೃತಾಂತ ನಮೋ ॥ ೨ ॥
ಕುಸ್ಥ ನಮೋ ಆಪಸ್ಥ ನಮೋ ತೇ । ಜಸ್ಥ ನಮೋ ವಾಯುಸ್ಥ ನಮೋ ॥
ಖಸ್ಥ ನಮೋ ಆಶಾಸ್ಥ ನಮೋ ಮ । ಧ್ಯಸ್ಥ ನಮೋ ನಮೊ ಸ್ವಸ್ಥ ನಮೋ ॥
ಮಸ್ಥ ನಮೋ ಕಮಲಸ್ಥ ನಮೋ ಕರ । ಣಸ್ಥ ನಮೋ ಕ್ರಿಯಾಸ್ಥ ನಮೋ ॥
ಗೋಸ್ಥ ನಮೋ ಕಾಲಸ್ಥ ನಮೋ ದೇ । ವಸ್ಥ ನಮೋ ಸರ್ವಸ್ಥ ನಮೋ ॥ ೩ ॥
ಶ್ರೀಶ ನಮೋ ಬ್ರಹ್ಮೇಶ ನಮೋ ಪ್ರಾ । ಣೇಶ ನಮೋ ವಾಣೀಶ ನಮೋ ॥
ವೀಶ ನಮೋ ಫಣಿಪೇಶ ನಮೋ ರು । ದ್ರೇಶ ನಮೋ ಉಮೇಶ ನಮೋ ।
ವಾಸವಮುಖದೇವೇಶ ನಮೋ ದು । ರ್ವಾಸಮುನಿಹೃದಯಾವಾಸ ನಮೋ ।

ಭಾಸಬಿಂದುಕ್ಷಿತಿಪೇಶ ನಮೋ ಹರಿ। ವ್ಯಾಸ ಋಷಭಮುಹಿದಾಸ ನಮೋ॥ ॥೪॥ ಲೋಕಾಂತರ್ಗತ ಲೋಕನಿಯಾಮಕ। ಲೋಕವಿಲಕ್ಷಣ ಪಾಲಯ ಮಾಂ॥ ಲೋಕಾಲೋಕಾಲೋಕನ ವಿಷಯುದ್ಯು। ಲೋಕಾಧಾರಕ ಪಾಲಯ ಮಾಂ॥ ಲೋಕಮಹಿತ ಪರಲೋಕಪ್ರದವರ। ಲೋಕೈಕೇಶ್ವರ ಪಾಲಯ ಮಾಂ॥ ಲೋಕಜನಕ ತ್ರೈಲೋಕ್ಯಬಂಧು ಕರು। ಣಾಕರ ವೆಂಕಟ ಪಾಲಯಮಾಂ॥೫॥ ಮುಕ್ತಾಮುಕ್ತನಿಷೇವಿತಾವಯವಾ। ಸಕ್ತಜನಪ್ರಿಯ ಪಾಲಯ ಮಾಂ॥ ಉಕ್ತನಿಗಮತತಿಸೂಕ್ತ ಸಿತಾಸಿತ। ರಕ್ತಪೀತನಿಭ ಪಾಲಯ ಮಾಂ॥ ವ್ಯಕ್ತಾವ್ಯಕ್ತಸ್ವಾಂತಮಹಿಮ ಸಂ। ಯುಕ್ತ ಸದಾ ಹೇ ಪಾಲಯ ಮಾಂ॥ ಯುಕ್ತಾಯುಕ್ತ ನ ಜಾನೆ ರಮಾಪತೆ। ಭಕ್ತೋಽಹಂ ತವ ಪಾಲಯ ಮಾಂ॥ ೬ ॥ ವೇದಸ್ತೇಯುಖಳಾಂತಕಕಮಠ ಧ। ರಾಧರ ನರಹರೇ ಪಾಲಯ ಮಾಂ॥ ಸಾಧಿತಲೋಕತ್ರಯ ಬಲಿವ್ಮದ ಹಯ। ಮೇಧವಿಭಂಜನ ಪಾಲಯ ಮಾಂ॥ಭೂಧರಭುವನನಿರೋಧಿ ಯದುಕುಲ ಮ। ಹೋದಧಿಚಂದ್ರಮ ಪಾಲಯ ಮಾಂ॥ ಬೋಧಬುದ್ಧತನುಶ್ರೀದಕಲ್ಕಿ ಕಪಿ। ಲಾದಿರೂಪ ಹೇ ಪಾಲಯ ಮಾಂ ॥ ೭ ॥ ಶರಣಾಗತರಕ್ಷಾಮಣಿ ಶಾರ್ಙ್ಗ। ಅರಿದರಧರ ತವ ದಾಸೋಽಹಂ। ವರಪುರುಷೋತ್ತಮ ವಾಙ್ಮ ನೋಮಯ ಭಾ। ಸ್ಕರಸನ್ನಿಭ ತವ ದಾಸೋಽಹಂ॥ ಗರುಡಸ್ಕಂಧಕರಾ ರೋಪಿತಪದ। ಸರಸಿಜಯುಗ ತವ ದಾಸೋಽಹಂ॥ ಉರಗಾಧಿಪಪರ್ಯಂ ಕಶಯನ ಮಂ। ದರಗಿರಿಧರ ತವ ದಾಸೋಽಹಂ ॥ ೮ ॥ ಸೃಷ್ಟಿಸ್ಥಿತಿಲಯ ಕಾರಣರೂಪ ಪ್ರ। ಹೃಷ್ಟತುಷ್ಟ ತವ ದಾಸೋಽಹಂ॥ ಪುಷ್ಟಮಹಿಮ ಪರ ಮೇಷ್ಠಿ ಜನಕ ಶಿ। ಷ್ಟೇಷ್ಟಹೃಷ್ಟ ತವ ದಾಸೋಽಹಂ॥ ಜ್ಯೇಷ್ಠಶ್ರೇಷ್ಠತ್ರಿವಿಷ್ಟ ಪದಾರ್ಜಿತ। ವೃಷ್ಣಿವರ್ಯ ತವ ದಾಸೋಽಹಂ॥ ಅಷ್ಟಾಪದಪ್ರದ ಪಕ್ಷಿ ಧ್ವಜ ಜಗ। ನ್ನಾಥವಿಠಲ ತವ ದಾಸೋಽಹಂ ॥ ೯ ॥ ಶ್ರೀಃ ॥

## ೧೦. ರಾಗ ಭೈರವಿ, ಅಟತಾಳ.

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ। ಸಂಗಸುಖವಿತ್ತು ಕಾಯೋ ಕರುಣಾಸಾಗರ ॥ ಪಲ್ಲ ॥ ಅರಿಯರೋ ನೀನಲ್ಲದೆ ಬೇರನ್ಯದೇವರ ।

ಮರಿಯರೋ ನೀ ಮಾಡಿದನಿಮಿತ್ತೋಪಕಾರ ॥ ತೊರೆಯರೋ ನಿನ್ನಂಘ್ರಿಸೇವಾ ಪ್ರತಿವಾಸರ । ವರಿಯರೋ ಪರತತ್ವವಲ್ಲದಿತರವಿಚಾರ ॥ ೧ ॥ ಮೂಕಬಧಿರರಂತಿಪ್ಪಾರೊ ನೋಳ್ಪಜನಕೆ । ಕಾಕುಯುಕುತಿಗಳ ತಾರರೋ ಮನಕೆ ॥ ಸ್ವೀಕರಿಸರನರ್ಪಿತ ವಂದೂ ಕಾಲಕೆ । ಆ ಕೈವಲ್ಯಸುಖ ಭೋಗ ಆವಂಗೆ ಬೇಕೆ ॥ ೨ ॥ ಜಯಾಜಯ ಲಾಭಾಲಾಭಾ ಮಾನಾಪಮಾನಾ । ಭಯಾಭಯ ಸುಖದುಃಖ ಲೋಷ್ಟಕಾಂಚನ ॥ ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನ । ಶ್ರೀಯರಸ ಚಿಂತಿಸುವರೋ ನಿನ್ನಾಧೀನ ॥ ॥ ೩ ॥ ಈಶತವ್ಯರಂತಿಪ್ಪಾರೇಕಾಂತಭಕ್ತರು । ದೇಶಕಾಲೋಚಿತಧರ್ಮಕರ್ಮಾಸಕ್ತರು ॥ ಆಶಾಕ್ರೋಧಲೋಭಮೋಹ ಪಾಶಮುಕ್ತರು । ಈ ಸುಜನರೇವೇ ಶಾಪಾನುಗ್ರಹಶಕ್ತರು ॥ ೪ ॥ ಕಂಡಕಂಡಲ್ಲಿ ವಿಶ್ವರೂಪ ಕಾಂಬೋರು । ಉಂಡುಣಿಸಿದ್ದೆಲ್ಲ ನಿನ್ನ ಯಜ್ಞವೆಂಬೋರೊ ॥ ಬಂಡುಣಿಯಂದಾದಿ ನಾಮಾವೃತವ ಸವಿವರು । ಹೆಂಡಾರು ಮಕ್ಕಳು ನಿನ್ನ ತೊಂಡರೆಂಬೋರೊ ॥ ೫ ॥ ಬಿಡರು ತಮ್ಮ ಸ್ವಧರ್ಮಗಳೇನು ಬಂದರು । ಬಡರು ದೈನ್ಯವರಿಬ್ಬರಿಗೂ ಲೋಕವಂದ್ಯರು ॥ ಪಿಡಿಯರು ನಿನ್ನ ದ್ವೇಷಿಗಳಿಂಪೇನು ಬಂದರು । ಕೊಡುವಾರು ಬೇಡಿದಿಷ್ಟಾರ್ಥ ನಿತ್ಯಾನಂದರು ॥ ॥ ೬ ॥ ನಗುವರೋ ರೋದಿಸುವರೋ ನಾಟ್ಯವಾಡುವರೋ । ಬಗೆಯರೋ ಬಡತನವು ಭಾಗ್ಯ ಭಾಗವತರು ॥ ತೆಗಿಯರೋ ನಿನ್ನಲ್ಲಿ ಮನವ ಪ್ರೇಮ್ಮಗಾದರು । ಜಗನ್ನಾಥವಿಠಲ ನಿನ್ನವರೇನು ಧನ್ಯರೋ ॥ ೭ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ✓೧೧. ರಾಗ ನವರೋಜು, ಛಾಪುತಾಳ.

ಶ್ರೀರಾಘವೇಂದ್ರ ನಿಮ್ಮ ಚಾರುಚರಣವ । ಸಾರಿದೆ ಶರಣಮಂದಾರ ಕರುಣವ ॥ ಪಲ್ಲ ॥ ಬೀರಿಭವವನಧಿ ತಾರಿಸು ತವಕದಿ । ಸೂರಿಸುಧೀಂದ್ರಕುಮಾರ ಉದಾರ ॥ ಅನುಪಲ್ಲ ॥ ಮುನಿರಾಯ ನಿನ್ನ ಪಾದವನರುಹ ಧ್ಯಾನಾ । ಪ್ರಣವನಸ್ತವನ ಅರ್ಚನೆಮಾಳ್ಪ ನಾನಾ । ಜನರ ವಾಂಛಿತ ವೀವ ಗುಣಪೂರ್ಣಜ್ಞಾನಾ । ಧನವ ಪಾಲಿಸೆನಗೀಕ್ಷಣ ನಿನ್ನಾಧೀನಾ ॥

ಮನುಜನ ನೀ ಪ್ರತಿದಿನದಿ ದಣಿಸುವದು । ಘನವೆ ಗುರುವೆ ಪಾವನತರ ಚರಿತಾ ॥ ೧ ॥ ಮೂಲರಾಮನ ಪಾದಕೀಲಾಲಜಮಧುಪಾ । ಬಾಲನ ಬಿನ್ನಪ ಲಾಲಿಸೋ ಮುನಿಪಾ। ತಾಳಲಾರೆನೋ ತಾಪತ್ರಯಸಂತಾಪಾ। ಕೇಳೋ ವಿಮಲಜ್ಞಾನಶೀಲಸ್ವರೂಪಾ ॥ ಭೂಲಲನಾಧವ ಕೋಲನಂದನಾ। ಕೂಲಗವರಮಂತ್ರಾಲಯನಿಲಯಾ ॥ ೨ ॥ ಕಲಿಕಲ್ಮಷವಿದೂರ ಕುಜನಕುಠಾರ । ನಳಿನಾಕ್ಷವಿಮಲ ಶ್ರೀತುಳಸಿಯಹಾರ । ಗಳಸುಶೋಭಿತ ಕಮಂಡಲದಂಡಧರಾ । ಅಲವಬೋಧರಮತ ಜಲಧಿವಿಹಾರಾ ॥ ಸುಲಲಿತಕರುಣಾಂಬುಧೇ ಜಗನ್ನಾಥವಿ । ಟ್ಠಲನೊಲುಮೆಯ ಪಡೆದಿಳೆಯೊಳು ಮೆರೆವೇ ॥ ೩ ॥ ಶ್ರೀಃ ॥

## ೧೨. ರಾಗ ಕಾಂಬೋಧಿ, ಝಂಪೆತಾಳ.

ಬಂಧನವ ಪರಿಹರಿಸು ಭಯವಿದೂರಾ ॥ ಕಂದರ್ಪಜನಕ ಕಾರುಣ್ಯದಲಿ ಭಕ್ತಜನ ॥ ಪಲ್ಲ ॥ ದುಷ್ಟಜನರುಗಳು ಬಲು ಕಷ್ಟಪಡಿಸುವದು ನಿನ। ಗೆಷ್ಟು ಉಸುರಲಿ ಕೇಳು ಜಿಷ್ಣುಸಖನೇ ॥ ವೃಷ್ಣೀಶ ನೀ ದಯಾದೃಷ್ಟಿಯಿಂದಲಿ ನೋಡಿ । ಹೃಷ್ಟನ್ನಮಾಡು ಸಂತುಷ್ಟಿಯಿಂದಲಿ ಬೇಗ ॥ ॥ ೧ ॥ ಹಯಮುಖನೆ ನಿನ್ನವರ ದಯದಿಂದ ಸಲಹುವದು । ವಯನಗಮ್ಯನೆ ಲೋಕತ್ರಯವ ನಿರತ ॥ ಪ್ರಿಯನೆಂದು ನಿನಗೆ ನಾ ದೈನ್ಯದಲಿ ಮೊರೆಯಿಡುವೆ। ದಯಮಾಡುವದು ನೀನು ಜಯಪ್ರದಾಯಕನಾಗಿ ॥ ॥ ೨ ॥ ವೀತಶೋಕನೆ ಎನ್ನ ಮಾತ ಲಾಲಿಸಿ ನಿನ್ನ। ದೂತರನ ಸಲಹುವದು ಪ್ರೀತಿಯಿಂದಾ ॥ ದಾತ ಶ್ರೀಗುರು ಜಗನ್ನಾಥವಿಠಲ ನಿನ್ನ । ನಾ ತುತಿಸಬಲ್ಲೆನೆ ವಿಧಾತಮುಖವಂದ್ಯಾ ॥ ೩ ॥ ಶ್ರೀಃ ॥

## ೧೩. ರಾಗ ರೇಗುಪ್ತಿ, ಆದಿತಾಳ.

ರಥವನೇರಿದ ರಥಿಕನಿವನ್ಯಾರೆ ಪೇಳಮ್ಮಮ್ಮ। ಕಥಿತಧ್ಯಾತ ಸಂಸ್ತುತ ವಿತತಾನತ । ಹಿತಕರ ದಿವಿಜರಪತಿ ಕಾಣಮ್ಮ॥ ಪಲ್ಲ ॥ ಹಾಟಕರತ್ನ ಸುಪೀಠ ಮಧ್ಯಮಂಟಪದಿ ಹೇಳಮ್ಮಮ್ಮ । ತಾಟಂಕಯುತ ವಧೂಟಿಯಗ ಮೇಳದಲ್ಲಿ ಪೇಳಮ್ಮಮ್ಮ। ಕೋಟಿಭಾಸ್ಕರಪ್ರಭಾಟೋಪದಿ ರಾಜಿ

ಸುವ ಪೇಳಮ್ಮಮ್ಮ ॥ ಆಟದಿ ಕುರುಜಮಹಾಟವಿ ಸವರಿ ಕಿ । ರೀಟಿಯ ಸಲಹಿದ ಖೇಟವಾಹನನೇ ॥ ೧ ॥ ಭುಜಗರಾಜಫಣಾಮಣಿ ಮಂಡಲ ಮಂಡಿತನೇ ಪೇಳಮ್ಮಮ್ಮ। ವಿಜಯವರದ ಅರಿಗದಾಂಬುಜಧರಭುಜನಾ ಪೇಳಮ್ಮಮ್ಮ॥ ಗಜಚರ್ಮಧರಾದ್ಯನಿಮಿಷಗಣಸೇವಿತನು ಪೇಳಮ್ಮಮ್ಮ॥ ಅಜನ ನಾಭಿಯಲಿ ಪಡದು ಸೃಜಿಸಪೇಳ್ದ ನೀರಜಲೋಚನನೇ ॥ ೨ ॥ ಲೋಕಾದೃಶಮಹಾಮಹಿಮ ರಮಾವಲ್ಲಭನೆ ಪೇಳಮ್ಮಮ್ಮ। ಶ್ವೇತದ್ವೀಪಾನಂತಾಸನ ವೈಕುಂಠನುಳಿದು ಪೇಳಮ್ಮಮ್ಮ। ವೀತಭಯ ಜಗನ್ನಾಥ ವಿಠಲ ಬರಲ್ಯಾಕೆ ಪೇಳಮ್ಮಮ್ಮ॥ ಭೂತಳಜನರಭಿಲಾಷೆಯ ಸಲಿಸ್ಸುವ। ವಾತಾಶನಗಿರಿಗಿಳಿದ ಕಾಣಮ್ಮಮ್ಮ॥ ೩ ॥ ಶ್ರೀಃ ॥

## ೧೪. ರಾಗ ಶಂಕರಾಭರಣ, ಅಟತಾಳ.

ಪಾಲಿಸೋ । ಶ್ರೀಹರಿಯೇ ನೀ । ಪಾಲಿಸೋ ॥ ಪಲ್ಲ॥ ಪಾಲಿಸೋ ಪರಮಪಾವನ್ನ । ಕವ । ಲಾಲಯ ನಂಬಿದೆ ನಿನ್ನ॥ ಆಹ ॥ ಬಾಲೇಂದು ಕೋಟಿಯ ಸೋಲಿಪ ನಖತೇಜ । ಮೂಲೋಕದರಸೆ ನೀನಾಲಯ ಬಿಡದೆಲೆ ॥ ಅನುಪಲ್ಲ ॥ ಹಿಂದೆ ಪ್ರಹ್ಲಾದನ ಮೊರೆಯ । ಕೇಳಿ । ಬಂದು ಕಾಯ್ದೆ ಭಕ್ತಪ್ರಿಯ । ಸುಖ । ಸಂದೋಹಮೂರುತಿ ಆಯ । ತಾರ್ಕ್ಷ್ಯ । ಯೆಂದೆಂದು ಬಿಡದಿರು ಕೈಯ ॥ ಆಹ ॥ ವೃಂದಾರಕೇಂದ್ರಗೆ ಬಂದ ದುರಿತಗಳ । ಹಿಂದೆ ಮಾಡಿ ಕಾಯ್ದೆ ಇಂದಿರಾರಮಣನೆ ॥ ೧ ॥ ಹರಣದಲ್ಲಿ ನಿನ್ನ ರೂಪ । ತೋರಿ । ಪರಿಹರಿಸು ಯೆನ್ನ ಪಾಪ । ದೂರ । ದಿರುತಿಹ ಹರಿ ಸಪ್ತದ್ವೀಪಾ । ಧಿಪ । ಸಿರಿಪತಿಭಕ್ತಸಲ್ಲಾಪ ॥ ಆಹ ॥ ಮರಣಜನನಗಳ ತರಿದು ಬಿಸುಟು ನಿನ್ನ। ಶರಣರಸಂಗದೊಳಿರಿಸಿ ಉದ್ಧರಿಸೆನ್ನ॥ ೨॥ ಮಾನಸಪೂಜೆ ನೀ ದಯದಿ । ಇತ್ತು । ಶ್ರೀನಾಥ ಕಳೆ ಭವವ್ಯಾಧಿ । ಕಾಯೋ । ಅನಾಥಬಂಧು ಸುಮೋದಿ । ಚತು । ರಾನನಪಿತ ಕೃಪಾಂಭೋಧಿ ॥ ಆಹ ॥ ನಾನೊಬ್ಬರನರಿಯೆ ಗಾನವಿನೋದನೆ । ಏನೇನು ಮಾಡುವ ಸಾಧನ ನಿನ್ನದು ॥ ೩ ॥ ಶರಣಪಾಲಕನೆಂಬ ಬಿರುದು । ಕೇಳಿ । ತ್ವರಿತದಿ ಬಂದೆನು ಅರಿದು । ಪರ । ತರನೆ ನೋಡೆನ್ನ ಕಷ್ಟಗೈದು ।

ಯೆನ್ನ ಪರಿಪರಿ ಅಪರಾಧ ಮರೆದು ॥ ಆಹ ॥ ಕರಣಶುದ್ಧನಮಾಡಿ ಕರಿ ಯೋ ನಿನ್ನ ಬಳಿಗೆ। ನರಕಂಠೀರವ ನಿನ್ನ ಚರಣವಾಶ್ರೈಸಿದೆ॥ ೪॥ ಸಂಸಾರ ಸಾಗರದೊಳಗೆ। ಎನ್ನ। ಹಿಂಸೆಗೊಳಿಸುವರೆ ಹೀಗೆ। ಎಲೋ। ಕಂಸಾರಿ ಬಾಗೆ ಅನ್ಯರಿಗೆ। ಇನ್ನು। ಸಂಶಯುವಿಲ್ಲೀವಾತಿಗೆ ॥ ಆಹ ॥ ಹಂಸಡಿಬಿ ಕರನ್ನು ಧ್ವಂಸಮಾಡಿದ ಶೌರಿ । ಶಿಂಶುಮಾರಮೂರ್ತಿ ದಿವಸದಿವಸ ದಲ್ಲಿ ॥ ೫ ॥ ಸಿರಿಬೊಮ್ಮ ಭವಶಕ್ರಾದ್ಯಮರ। ಕೈಯ್ಯ। ನಿರತ ತುತಿಸಿ ಕೊಂಬ ಧೀರಾ। ಶುಭ। ಪರಿಪೂರ್ಣಗುಣಪಾರಾವಾರ। ಪೊರೆ। ವರನ ಕಾಣೆನು ಹೇ ಸುಂದರ ॥ ಆಹ ॥ ಸ್ಮರನ ಕಾಂತಿಯು ನಿರಾಕರಿಸುವ ತೇಜನೆ। ಯರವುಮಾಡದೆ ಹೃತ್ಸರಸಿಜದೊಳಗಿದ್ದು ॥ ೬ ॥ ಮೊದಲು ಮತ್ಸ್ಯಾವತಾರದಿ। ವೇದ। ವಿಧಿಗೆ ತಂದಿತ್ತ ಸುಮೋದಿ । ಆಶ। ರಧಿ ಯೊಳು ಸುರರಿಗೋಸುಗದಿ। ಹೋಗಿ। ಸುಧೆಯು ಸಾಧಿಸಿ ಛುಣಿಸೀದಿ ॥ ಆಹ ॥ ಅದುಭೂತಭೂಮಿಯು ತೆಗದೊಯ್ದನ ಕೊಂದು । ಮುದದಿ ಹಿರಣ್ಯಕನುದರ ಬಗಿದ ಧೀರ ॥ ೭ ॥ ಬಲಿಯು ಮನೆಗೆ ಪೋಗಿ ದಾನ। ಬೇಡಿ। ತುಳಿದೆ ಪಾತಾಳಕ್ಕೆ ಅವನ। ಪೆತ್ತ। ವಳಶಿರ ತರಿದ ಪ್ರವೀಣ। ನಿನ್ನ। ಬಲಕೆಣೆಗಾಣೆ ರಾವಣನ ॥ ಆಹ ॥ ತಲೆಯ:ನಿಳುಹಿ ಯದುಕುಲ ದಲ್ಲಿ ಜನಿಸಿ ಆ। ಲಲನೆರ ಪತಿವ್ರತವಳಿದ ಅಶ್ವಾರೂಢ ॥ ೮ ॥ ನಿನ್ನ ಸಂಕಲ್ಪವಲ್ಲದೆ। ಮತ್ತೆ । ಅನ್ಯಥಾವಾಗಬಲ್ಲಾದೆ। ಹೀಗೆ। ಚನ್ನಾಗಿ ನಾ ತಿಳಿಯುದೆ। ಮಂದ। ಮಾನವನಾಗಿ ಬೇಡಿದೆ ॥ ಆಹ ॥ ಯೆನ್ನಪರಾಧ ಗಳನ್ನು ನೀ ನೋಡದೆ। ಮನ್ನಿಸು ದಯುದಿ ಜಗನ್ನಾಥವಿಠಲ ನೀ ॥ ೯ ॥

## ೧೫. ರಾಗ ಪಂತುವರಾಳಿ, ಆದಿತಾಳ.

ಫಲವಿದು ಬಾಳ್ದುದಕೆ ॥ ಸಿರಿ। ನಿಲಯನ ಗುಣಗಳ ತಿಳಿದು ಭಜಿಸು ವದೆ ॥ ಪಲ್ಲ ॥ ಪ್ರತಿದಿನದಲಿ ಶ್ರುತಿಸ್ಮೃತಿಗಳಿಂದ ಸಂ। ಸ್ತುತಿಸುತ ಲಕ್ಷ್ಮೀಪತಿಗುಣವಾ ॥ ಕೃತಿಪತಿಸೃಷ್ಟಿಸ್ಥಿತಿಲಯಕಾರಣ। ಇತರ ದೇವತೆ ಗಳಲ್ಲಲ್ಲೆಂಬುದೇ ॥ ೧ ॥ ಪವನಮತಾನುಗರವನಾನೆಂತೆಂದವನಿಯೊಳಗೆ ಸತ್ಕವಿಜನರಾ ॥ ಭವನದೊಳಗೆ ಪ್ರತಿದಿವಸದಿ ಸುಕಥಾ । ಶ್ರವಣಮಾ

ಡುತಲಿ ಪ್ರವರನಾಗುವದೇ ॥ ೨ ॥ ಸ್ವೋಚಿತಕರ್ಮಗಳಾಚರಿಸುತ ಬಲು । ನೀಚರಲ್ಲಿಗೆ ಪೋಗ್ಯಾಚಿಸದೇ ॥ ಖೇಚರವಾಹ ಚರಾಚರಬಂಧಕ । ಮೋಚಕನಹುದೆಂದ್ಯೋಚಿಸುತಿಪ್ಪುದೇ ॥ ೩ ॥ ಸಿಚ್ಚಸುಭಕುತಿಯೊಳಚ್ಯುತನಂಘ್ರಿಗ । ಳರ್ಚಿಸಿ ಮೆಚ್ಚಿಸುತೆಚ್ಚರದಿ ॥ ತುಚ್ಛವಿಷಯಗಳ ನಿಚ್ಛಿಸದೆ ಯ । ದೃಚ್ಛಲಾಭದಿಂ ಪ್ರೋಚ್ಚನಾಗುವದೇ ॥ ೪ ॥ ಮನೋವಾಕ್ಕಾಯದೊಳನುಭವಿಸುವದಿನ । ದಿನದ ವಿಷಯಸಾಧನಗಳನೂ ॥ ಅನಿಲಾಂತರ್ಗತ ವನರುಹದಳಲೋ । ಚನನಿಗರ್ಪಿಸಿ ನಾ ದಾಸನೆಂತೆಂಬುದೇ ॥ ೫ ॥ ವಾಸವಮುಖವಿಬುಧಾಸುರನಿಚಯಕೆ । ವಾಸುದೇವನೆ ಶುಭಾಶುಭದಾ ॥ ಈಸಮಸ್ತಜಗದೀಶ ಕೇಶವ । ನೀಶಜೀವರೆಂಬೀ ಸುಜ್ಞಾನವೇ ॥ ೬ ॥ ಪಂಚಭೇದಯುತ ಪ್ರಪಂಚ ಸತ್ಯ ವಿ । ರಿಂಚಿಮುಖರು ಬಲಿವಂಚಕಗೆ ॥ ಸಂಚಲಪ್ರತಿಮೆಯ ಚಂಚಲಪ್ರಕೃತಿಯ । ಸಂಚಿಂತಿಸಿ ಮೋದಲಾಂಛನಾಗುವದೇ ॥ ೭ ॥ ಹೃದಯದಿ ರೂಪವು ವದನದಿ ನಾಮವು । ಉದರದಿ ನೈವೇದ್ಯವು ಶಿರದೀ ॥ ಪದಜಲ ನಿರ್ಮಾಲ್ಯವನೆ ಧರಿಸಿ ಕೋ । ವಿದರ ಸದನ ಹೆಗ್ಗದವ ಕಾಯುವದೇ ॥ ೮ ॥ ಪಂಚಕ್ರತುಗಳಲಿ ಪಂಚಾಗ್ನಿಗಳಲಿ । ಪಂಚಪಂಚರೂಪವ ತಿಳಿದೂ ॥ ಪಂಚಸುಸಂಸ್ಕಾರಾಂಚಿತನಾಗಿ ದ್ವಿ । ಪಂಚಕರಣದಿ ಪ್ರಪಂಚವನರಿವುದೇ ॥ ॥ ೯ ॥ ಪಾತ್ರರ ಸಂಗಡ ಯಾತ್ರೆಯ ಚರಿಸಿ ವಿ । ಧಾತೃ ಪಿತನ ಗುಣಸ್ತೋತ್ರಗಳಾ ॥ ಶ್ರೋತ್ರದಿ ಸವಿದು ವಿಚಿತ್ರಾನಂದದಿ । ಗಾತ್ರವ ಮರೆದು ಪರತ್ರವ ಪಡಿವದೇ ॥ ೧೦ ॥ ಹಂಸಮೊದಲು ಹದಿನೆಂಟು ರೂಪಗಳ । ಸಂಸ್ಥಾನವ ತಿಳಿದನುದಿನದೀ ॥ ಸಂಸೇವಿಸುವ ಮಹಾಪುರುಷರ ಪದ । ಪಾಂಸುವ ಧರಿಸಿ ಅಸಂಶಯನಪ್ಪುದೇ ॥ ೧೧ ॥ ವರಗಾಯತ್ರೀನಾಮಕಹರಿಗೀ । ರೆರಡಂಘ್ರಿಗಳ ವಿವರ ತಿಳಿದೂ ॥ ತರುವಾಯದಿ ಷಡ್ವಿಧರೂಪವ ಸಾ । ದರದಲಿ ಧ್ಯಾನಿಸಿ ನಿರತ ಜಪಿಸುವದೇ ॥ ೧೨ ॥ ಬಿಗಿದಕಂಠದಿಂ ದೃಗ್‌ಬಾಷ್ಪಗಳಿಂ । ನಗೆಮೊಗದಿಂ ರೋಮಗಳೊಗೆದೂ ॥ ಮಿಗೆ ಸಂತೋಷದಿ ನೆಗದಾಡುತ ನಾ । ಲ್ಮೊಗನಯ್ಯನ ಗುಣ ಪೊಗಳಿ ಹಿಗ್ಗುವದೇ ॥ ೧೩ ॥ ಗೃಹಕರ್ಮವ ಬ್ಯಾಸರದಲೆ ಪರಮೋ । ತ್ಸಹದಲಿ

ಮಾಡುತ ಮೂರ್ಜಗದಾ ॥ ಮಹಿತನ ಸೇವೆಯಿದೆನುತಲಿ ಮೋದದಿ । ಅಹರಹರ್ಮನದಿ ಸಮರ್ಪಿಸುತಿಪ್ಪುದೇ ॥ ೧೪ ॥ ಕ್ಲೇಶಾನಂದಗಳೀಶಾಧೀನ ಸ । ಮಾಸಮಬ್ರಹ್ಮಸದಾಶಿವರು ॥ ಈಶಿತವ್ಯರು ಪರೇಶನಲ್ಲದೆ । ಶ್ವಾಸಬಿಡುವಶಕ್ತಿ ಲೇಶವಿಲ್ಲೆಂಬುದೇ ॥ ೧೫ ॥ ಆಪರಮಾತ್ಮನ ರೂಪದ್ವಯವು ಪ । ರಾಪರತತ್ವಗಳಿದರೊಳಗೆ ॥ ಸ್ತ್ರೀಪುಂ ಭೇದದಿ ಈಪಬ್ರಾಂಡದಿ । ವ್ಯಾಪಿಸಿ ಇಹನೆಂದೀಪರಿ ತಿಳಿವುದೇ ॥ ೧೬ ॥ ಏಕೋತ್ತರ ಪಂಚಾಶದ್ವರ್ಣಗ । ಳೇಕಾತ್ಮನ ನಾಮಂಗಳಿವು ॥ ಮಾಕಮಲಾಸನ ಮೊದಲಾದಮರರು । ಸಾಕಲ್ಯದಿ ಇವನರಿಯರೆಂತೆಂಬುದೇ ॥ ೧೭ ॥ ಒಂದು ರೂಪದೊಳಗನಂತರೂಪಗಳ್ । ಪೊಂದಿಪ್ಪವು ಗುಣಗಣಸಹಿತಾ ॥ ಹಿಂದೆ ಮುಂದೆ ಯೆಂದೆಂದಿಗು ಶ್ರೀಗೋ । ವಿಂದಗೆ ಸರಿಮಿಗಿಲಿಲ್ಲೆಂತೆಂಬುದೇ ॥ ॥ ೧೮ ॥ ಮೇದಿನಿಪರಮಾಣಂಬುಕಣಂಗಳ । ನೈದಬಹುದು ಪರಿಗಣತೆಯನು ॥ ಮಾಧವನಾನಂದಾದಿಗುಣಂಗಳ । ನಾದಿಕಾಲದಲಗಣಿತವೆಂಬುದೇ ॥ ೧೯ ॥ ಮೂಜಗದೊಳಗಿಹ ಭೂಜಲಖೇಚರ । ಈಜೀವರೊಳು ಮಹೌಜಸನಾ ॥ ಸೋಜಿಗ ಬಹುವಿಧ ನೈಜವಿಭೂತಿಯ । ಪೂಜಿಸುತನುದಿನ ರಾಜಿಸುತಿಪ್ಪುದೇ ॥ ೨೦ ॥ ಹರಿಕಥೆ ಪರಮಾದರದಲಿ ಕೇಳುತ । ಮರೆದು ತನುವ ಸುಖಸುರಿವುತಲೀ ॥ ಉರುಗಾಯನ ಸಂದರುಶನ ಹಾರೈ । ಸಿರುಳುಹಗಲು ಜರಿಜರಿದು ಬಳಲುವದೇ ॥ ೨೧ ॥ ವಿಷಯೇಂದ್ರಿಯಗಳ ತದಭಿಮಾನಿ ಸುಮ । ನಸರೊಳಿದ್ದು ನಿಯಾಮಿಸುತಾ ॥ ಶ್ವಸನಾಂತರ್ಗತ ವಾಸುದೇವ ತಾ । ವಿಷಯಂಗಳ ಭೋಗಿಸನೆಂತೆಂಬುದೇ ॥ ೨೨ ॥ ಗುಣಕಾಲಾಹ್ವಯ ಆಗಮಾರ್ಣವ ಕುಂ । ಭಿಣಿಪರಮಾಣ್ವಂಬುಧಿಗಳಲೀ ॥ ವನಗಿರಿನದಿ ಮೊದಲಾದದರೊಳು ಇಂ । ಧನಗತಪಾವಕನಂತಿಹನೆಂಬುದೇ ॥ ೨೩ ॥ ಅನಲಂಗಾರದೊಳಿಪ್ಪೋಪಾದಿಲಿ । ಅನಿರುದ್ಧನು ಚೇತನರೊಳಗೆ ॥ ಕ್ಷಣ ಬಿಟ್ಟಗಲದೆ ಏಕೋ ನಾರಾಯಣ ಶ್ರುತಿಪ್ರತಿಪಾದ್ಯನು ಇಹನೆಂಬುದೇ ॥ ೨೪ ॥ ಕಾರಣಕಾರ್ಯಾಂತರ್ಗತ ಅಂಶವ । ತಾರಾವೇಶಾಹಿತ ಸಹಜಾ ॥ ಪ್ರೇರಕಪ್ರೇರ್ಯಾಹ್ವಯ ಸರ್ವತ್ರ ವಿ । ಕಾರವಿಲ್ಲದಲೆ ತೋರುವನೆಂಬುದೇ ॥ ೨೫ ॥ ಪಕ್ಷ್ಯ

ಗಳಕ್ಷಿಗಳಗಲದಲಿಪ್ಪಂ । ತಕ್ಷರಪುರುಷನಪೇಕ್ಷೆಯುಳ್ಳೀ । ಕುಕ್ಷಿಯೊಳಬ್ಜಜತ್ರ್ಯಕ್ಷಾದ್ಯಮರರ । ಈಕ್ಷಿಸಿ ಕರುಣದಿ ರಕ್ಷಿಪನೆಂಬುದೇ ॥ ೨೬ ॥ ಪನ್ನಗಾಚಲಸನ್ನಿವಾಸ ಪಾ । ವನ್ನಚರಿತ ಸದ್ಗುಣಭರಿತ ॥ ಜನ್ಯಜನಕಲಾವಣ್ಯಗುಣಸಿಧಿ ಜ । ಗನ್ನಾಥವಿಟ್ಠಲಾನನ್ಯಪನೆಂಬುದೇ ॥ ೨೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಶಂಕರಾಭರಣ, ಆದಿತಾಳ.

ಹರಿದಾಸರಿಗೆ ಒಬ್ಬರ ಪೊರವೆಯಾತಕೆ ॥ ಅರಿವೆ ಅನ್ನಾಭರಣ ದ್ರವ್ಯ । ಸರ್ವವು ಶ್ರೀವರನೆ ಯೆಂಬ ॥ ಪಲ್ಲ ॥ ನಿತ್ಯಾನಂದ ನಿತ್ಯಜ್ಞಾನಾ । ನಿಮಿತ್ತಬಂಧು ಭಕ್ತರಿಗೆ ॥ ನಿತ್ತದ್ದೆ ಸಂಪತ್ತು ಯೆಂದು । ಕೀರ್ತಿಸುತ್ತ ನರ್ತಿಸುವ ॥ ೧ ॥ ದೋಷದೂರನೊಬ್ಬ ಪೋಷ್ಯ । ಪೋಷಕಾಧಾರಾಧೇಯ ॥ ದೋಷಕಾರಿ ತ್ರೈಲೋಕ್ಯವಿ । ಭೂಷಣ ವಿಭೂತಿದನೆಂಬ ॥ ೨ ॥ ಎನ್ನಸ್ವಾಮಿ ಸರ್ವರಿಗೆ । ಎನ್ನ ಬಿಂಬ ಯೆಲ್ಲರಿಗೆ ॥ ಮಾನ್ಯಮಾನದನುಜಗ । ಧ್ಭಿನ್ನನೆಂದು ತುತಿಸುತಿಪ್ಪ ॥ ೩ ॥ ಜನನೀಜನಕ ಲಕ್ಷ್ಮೀನಾರಾ । ಯಣನೆ ಪುತ್ರಮಿತ್ರನೆಂದು ॥ ಕ್ಷಣಕ ಕೊಂಡಾಡುತನ್ಯರ । ಗಣನೆಮಾಡದಿಪ್ಪ ನಿಜ ॥ ೪ ॥ ಹಾನಿಲಾಭಕೀರ್ತಿ ಅಪ । ಮಾನಾಮಾನ ಪುಣ್ಯಪಾಪ ॥ ಶ್ರೀನಿವಾಸಗರ್ಪಿಸಿ ಮು । ದ್ದಾನೆಯಂತೆ ಚರಿಸುತಿಪ್ಪ ॥ ೫ ॥ ಅನಂತಜೀವರಿಗಿನ್ನೂ । ಅನಾದಿ ಅನ್ನದನಾಗಿ ॥ ಅನಿರ್ವಿಣ್ಣನಾಮಕನೆಂದು । ಸನ್ನುತಿಸಿ ಹಿಗ್ಗುತಿಪ್ಪ ॥ ೬ ॥ ಸರ್ವಜೀವದೇಹಾಂತಸ್ಥ । ಸರ್ವಜಗನ್ನಾಥವಿಠಲ ॥ ಸರ್ವರೂಪ ಸರ್ವನಾಮ । ಸರ್ವವೇದೋದಿತನೆಂಬೋ ॥ ೭ ॥

## ೧೭. ರಾಗ ತೋಡಿ, ಅಟತಾಳ.

ತುತಿಸಬಲ್ಲೆನೆ ನಾ ನಿನ್ನ । ವೆಂಕಟರನ್ನ ॥ ಪಲ್ಲ ॥ ತುತಿಸಬಲ್ಲೆನೆ ಲಕ್ಷ್ಮೀಪತಿ ನಿನ್ನ ಬೊಮ್ಮಪಾ । ರ್ವತಿ ಪತ್ಯಾದ್ಯಖಿಳವಡದತುಳಮಹಿಮೆಗಳ ॥ ॥ ಅನುಪಲ್ಲ ॥ ನಮಿಪ ಜನರ ಕಲ್ಪದ್ರುಮ ದುಷ್ಟದಾನವ । ದಮನ ದಿವಿಜಕುಲೋತ್ತಮ ಲಕ್ಷ್ಮೀಪವನಾದಿ । ಸುಮನಸಾರ್ಚಿತಪಾದಕಮಲ

ಯುಗ್ಮನೆ ಅನು । ಪಮರೂಪಲಾವಣ್ಯ ಕಮನೀಯಕಾಯ ಹ್ಯ । ತ್ರಿವಿ ರಭಾಸ್ಕರ ಶ್ರೀಭೂರಮಣಸರ್ವಗ ಸದಾ। ಗಮವೇದ್ಯ ವೇದವ್ಯಾಸಾ॥ ಕಪಿ ಲದತ್ತ । ಕುಮುದಾಪ್ತಕೋಟಿಭಾಸಾ । ತ್ವದ್ಭಕ್ತರ । ಸಮುದಾಯಕೀ ಯೋ ಲೇಸಾ। ಅನತಬಂಧು। ಸುಮುಖ ಸುಲಭನೆಂದಾನಮಿಪೆ ಯೆನ್ನ ರಸಾ ॥ ೧ ॥ ಘನಮಹಿಮನೆ ವೃಂದಾವನವಾಸಿ ಸ್ವಪ್ರಯೋ । ಜನವಿವ ರ್ಜಿತ ಗೋವರ್ಧನಧಾರಿ ಗೋಗೋಪೀ । ಜನಮನೋರಂಜನ ಜನಕ ಜಾರಮಣ ಪೂ । ತನಿಪ್ರಾಣಾಂತಕ ವೇದವಿನುತ ಶ್ರೀವತ್ಸಲಾಂ। ಛನ ವಕ್ಷ ಕೌಸ್ತುಭಮಣಿ ವೈಜಯಂತೀ ಸ। ದ್ವನಮಾಲಾಂಚಿತಕಂಧರಾ ॥ ಸತ್ಕಲ್ಯಾಣ। ಗುಣಜ್ಞಾನಾತ್ಮಕ ಶರೀರಾ। ಸಂತತ ನಿಷ್ಕಿಂ। ಚನಭಕ್ತಜನ ಮಂದಾರಾ । ವಂದಿಸುವೆ ಮ । ನ್ಮನದಲಿ ನಿಲಿಸೋ ಕರುಣಾಪಾರಾ ವಾರಾ ॥ ೨ ॥ ಕಲಿಮುಖ್ಯದೈತ್ಯಗಂಟಲಗಾಣ ಗುರುತಮ । ಬಲಿಬಂಧ ಮೋಚಕ ಸುಲಭಚಿತ್ಸುಖದಾಯಿ । ಫಲ ಚತುಷ್ಟಯನಾಮ ಫಲಸಾರ ಭೋಕ್ತೃ ಬೆಂ। ಬಲನಾಗಿ ಭಕತರ ಸಲಹುವ ಕರುಣಿ ಶಂ। ಫಲಿಪುರ ವಾಸಿ ಬಾಂಬೊಳೆಯ ಜನಕ ಲಕ್ಷ್ಮೀನಿಲಯ ನಿರ್ಗತದುರಿತಾ ॥ ನಿಮ್ಮ ನದ ಚಂ। ಚಲವ ಬಿಡಿಸೋ ನಿರತಾ। ಬೇಡೀಕೊಂಬೆ। ತಲೆಬಾಗಿ ಸರ್ವ ಗತಾ । ನೀನಹುದೆಂದು । ತಿಳಿಸೋ ತೀವ್ರದಿ ಮುಪ್ಪೊಳಲುರಿಗನ ತಾತಾ ॥ ೩ ॥ ಕವಿಭಿರೀಡಿತ ಪುಣ್ಯಶ್ರವಣಕೀರ್ತನ ಮತ್ಸ್ಯ। ದೈವತಾ ರಾಂತರ್ಯಾಮಿ ಪ್ರವಿವಿಕ್ತಭುಗ್ವಿಭು । ಭುವನನಿಧಿಯ ಪೆತ್ತ ಸವನ ತ್ರಯಾಹ್ವಯ। ಶಿವರೂಪಿ ಶಿವದ ಭೂರ್ಭುವಸ್ವಸ್ಥ ಸ್ವವಶ ಭಾ । ರ್ಗವ ನಿನ್ನೊಳಿಪ್ಪ ದಾನವನ ಸಂಹರಿಸುವ ನೆವದಿಂದ ದಾಶರಥೀ ॥ ಸಂಗಡ ಯುದ್ಧ । ತವಕದಿ ಮಾಡಿ ಭೀತಿ। ಬಟ್ಟವನಂತೆ। ಅವನಿಗೆ ತೋರ್ದಿ ರೀತಿ। ವರ್ಣಿಸಲಿನ್ನು। ಪವನಮುಖಾದ್ಯರಿಗವಶ ನಿನ್ನಯ ಖ್ಯಾತಿ ॥ ೪ ॥ ಗತಶೋಕ ಗಾಯತ್ರೀಪ್ರತಿಪಾದ್ಯ ತತ್ವಾಧಿ । ಪತಿಗಳೆನಿಸುವ ದೇವತೆ ಗಳೊಳಿದ್ದು ಮಾ। ರುತನಿಂದ ಒಡಗೂಡಿ ಪ್ರತಿದೇಹಗಳಲಿ ಯೋ। ಗ್ಯತೆ ಯನರಿತು ಕರ್ಮಗತಿಗಳನೀವೆ ಸಾಂ। ಪ್ರತ ಬೇಡಿಕೊಂಬೆ ಅನತರ ಸಂ ತೈಸೆಂದು ಪ್ರಥಮಾಂಗ ಪ್ರಿಯಸತ್ತಮ ॥ ಸೌಭಾಗ್ಯಸಖಿ। ಭೃತಸಾರ

ಸರ್ವೋತ್ತಮ । ನೀನೇ ಪಾಂಡು । ಸುತರಾದ ಧರ್ಮಭೀಮಾ । ಪಾರ್ಥರ ಕಾಯ್ದಿ । ಪ್ರತಿಕಾಣೆ ನಿನಗೆ ಸಂತತ ಪರಂಧಾಮಾ ॥ ೫ ॥ ಬಿಸಜಸಂಭ ವನ ನಿರ್ಮಿಸಿ ನಾಭಿಕಮಲದಿ । ಸ್ವಶರೀರದೊಳು ಸುಮನಸರ ಪಡೆದು ನಿನ್ನಾ । ಪೆಸರಿಟ್ಟು ಅವರವರೊಶನಾದೋಪಾದಿ ತೋ । ರಿಸಿದಿ ನೀಸ್ವಾ ತಂತ್ರ ಅಸಮನೆನಿಸಿಕೊಂಡು । ಬಸರೊಳಗಿಟ್ಟು ಪೊಂಬಸರಾದಿ ಸುರರ ಪಾಲಿಸುವಿ ನೀ ಪ್ರತಿಕಲ್ಪದಿ । ನರಕ ಸ್ವರ್ಗ । ವಸುಮತಿ ಯಮಲೋ ಕದಿ । ವಾಸಿಸುತ ರಕ್ಕಸರನಂಧಂತಮದಿ । ದಣಿಸುತಿಪ್ಪಿ । ಪ್ರಸವಿತ್ತ ನಾಮ ವಂದಿಸುವೆ ಪ್ರವೋದೀ ॥ ೬ ॥ ಉದಿತಭಾಸ್ಕರನಂತೆ ಸುದತೇರಿಂ ದೊಡಗೂಡಿ । ಉದರನಾಮಕ ನೀನು ಉದರದೊಳಿದ್ದೆನ್ನ । ಉದಕಗಳಿಗೆ ನಿತ್ಯಾಸ್ಪದನಾಗಿ ಜೀವರ । ಹೃದಯದೊಳಿರುತಿಪ್ಪೆ ಸದಸದ್ವಿಲಕ್ಷಣ । ವಿಧಿಭವಶಕ್ರಾದಿ ತ್ರಿದಶರೊಂದಿತಪಾದ । ಬದಿಗನಾಗಿರಲು ಪಾಪ । ಕರ್ಮ ಗಳು ಬಂ । ದೊದಗುವವೇನೋ ಶ್ರೀಪಾ । ಬಿನ್ನೈಸುವೆ । ಬುಧಜನರಂ ತಸ್ತಾಪಾ । ಕಳೆದು ನಿತ್ಯ । ಬೆದರದಂದದಲಿ ಪಾಳ್ಪುದು ದೋಷನಿ ರ್ಲೇಪಾ ॥ ೭ ॥ ಪಣೆಗಣ್ಣನ್ವರದಿಂದಾಗ್ರಣಿಯಾದ ದುಷ್ಟರಾ । ವಣನ ಬಾಹುಬಲ ಗಣಿಸದೆ ನಿಶಿತಮಾ । ರ್ಗಣದಿ ಸದೆದು ವಿಭೀಷಣಗೆ ನೀ ಲಂಕಾಪ । ಟ್ಟಣಭೋಗ ತತ್ಕಾಲ ಉಣಲಿತ್ತು ಭಕ್ತಗೆ । ಪ್ರಣತಕಾಮದ ನೆಂಬೋ ಗುಣ ನಿನ್ನಲ್ಲಿದ್ದಕಾರಣದಿ ಪ್ರಾರ್ಥಿಸುವೆ ನಿನ್ನಾ । ದಾಸರೊಳು । ಗಣಿಸು ನೀ ದಯದಿ ಯೆನ್ನಾ । ತಪ್ಪುಗಳ ನೀ । ನೆಣಿಸಲಾಗದು ಪ್ರಸನ್ನಾ । ಪಾಲಕನೆ ಕುಂ । ಭಿಣಿಸುರರನು ಕಾಯೋ ಕ್ಷಣಕ ಲಕ್ಷ್ಮಣನಣ್ಣಾ ॥ ॥ ೮ ॥ ಆಪದ್ಬಾಂಧವ ಬಹುರೂಪ ರುಕ್ಮಿಣೀಶಾ । ತಾಪಸಜನರ ಹೃತ್ತಾ ಪಾಪಹರ ಧರ್ಮ । ಸ್ಥಾಪಕ ಸ್ಥವಿರ ನಿರ್ಲೇಪಗುಣತ್ರಯ । ವ್ಯಾಪಕ ಸುಖಧರ್ಮಪ್ರಾಪಕ ಸುಜನಲೋ । ಕೋಪಕಾರಕ ಧರ್ಮವ್ಯೂಪ ಊರ್ಧ್ವಗ ನಿರ್ಗುಣೋಪಾಸಕರ ಸಲಹ ॥ ಲೋಸುಗದಿ ಸ । ವಿಾಪದ ಲ್ಲಿರು ಶ್ರೀಸಹಾ । ದುರ್ಜನರ ಸ । ಲ್ಲಾಪದಿ ಬಹ ಕಲಹಾ । ಮನ್ನಿಸೋ ಭವಾ । ಕೂಪಾರನಾವಿಕ ಭೂಪತಿ ವರಹಾ ॥ ೯ ॥ ಶಫರ ಕೂರ್ಮ ಕ್ರೋಡವಪುಷಹಿರಣ್ಯಕ । ಶಿಪುವಿನ ಸೀಳ್ದ ಕಾಶ್ಯಪಿಯಾಚಕನೆ ದುಷ್ಟ ।

ನೃಪರ ಸಂಹರಿಸಿದ ಕಪಿವರಪೂಜಿತ । ದ್ರುಪದಾತ್ಮಜೆಯ ಕಾಯ್ದ ತ್ರಿಪು ರಾರಿ ಕಲಿಮುಖ । ರುಪಟಳ ಬಿಡಿಸಿದ ಕೃಪಣವತ್ಸಲ ಕಲ್ಕಿ । ಅಪವರ್ಗ ಪ್ರದ ಅಮಿತಾ ॥ ರೂಪಾತ್ಮಕ । ಸುಫಲ ಚಿತ್ಸುಖಭರಿತಾ । ತ್ರೈಲೋಕ್ಯಕ್ಕೆ । ಪ್ರಪಿತಾಮಹನೆ ನಿರತಾ । ಪ್ರಾರ್ಥಿಸುವೆ ನಿ । ನ್ನಪರೋಕ್ಷವಿತ್ತು ಪಾಲಿ ಪುದೆಮ್ಮ ಸ್ವರತಾ ॥ ೧೦ ॥ ವಟಪತ್ರಶಯನ ವೆಂಕಟಗಿರಿನಿಲಯ ನಿ । ಷ್ಕುಟಿಲ ದುರ್ವಿಷಯಲಂಪಟವ ಸದೆದು ನಿನ್ನ । ಭಟಜನರಿಗೆ ಧರ್ಮ ಘಟಕನಾಗುವೆ ನಿತ್ಯ । ವಟುರೂಪಿ ಎಟ ಪಾದಾಂಗುಟದಿ ಅಬ್ಜ ಜಾಂಡ । ಕಟಾಹ ಭೇದಿಸಿ ದೇವತಟಿನೀಯ ಪಡಿಯೇ ಧೂ । ರ್ಜಟಿ ತಲೆಯೊಳು ಧರಿಸೀ । ನಿನ್ನ ನಾಮ । ಪಠಿಸುತ್ತ ಸತಿಗೆರಸಿ । ಕುಣಿದ ನೆಂದು । ತ್ಕಟದಿ ಕೈಗಳ ಬಾರಿಸಿ । ಜಗನ್ನಾಥ । ವಿಠಲ ಸರ್ವೋತ್ತಮ ವಿಟವೆಂದುದ್ಘಟಿಸೀ ॥ ೧೧ ॥ ಶ್ರೀಃ ॥

೧೮. ರಾಗ ಮೋಹನ, ಅಟತಾಳ.

ಗೋಪಾಲ ದಾಸರಾಯ । ನಿನ್ನಯ ಪಾದ । ನಾ ಪೊಂದಿದೆನು ನಿಶ್ಚ ಯಾ ॥ ಪಲ್ಲ ॥ ಈಪೀಡಿಸುವ ತ್ರಯತಾಪಗಳೋಡಿಸಿ । ಕೈಪಿಡಿದೆನ್ನನು ನೀ ಪಾಲಿಪುದು ಜೀಯಾ ॥ ಅನುಪಲ್ಲ ॥ ಘೋರವ್ಯಾಧಿಗಳ ನೋಡಿ । ವಿಜಯರಾಯ । ಭೂರಿಕರುಣವ ಮಾಡಿ । ತೋರಿದರಿವರೇ ಉದ್ಧಾರಕ ರೆಂದಂದಿ । ನಾರಭ್ಯ ತವ ಪಾದ ಸಾರಿದೆ ಸಲಹೆಂದು ॥ ಸೂರಿಜನ ಸಂಪ್ರೀಯ ಸುಗುಣೋ । ದ್ಧಾರ ದುರುಳನ ದೋಷನಿಚಯವ । ದೂರ ಗೈಸೊ ದಯಾಂಬುನಿಧೇ ನಿ । ವಾರಿಸದೆ ಕರಪಿಡಿದು ಬೇಗದಿ ॥ ೧ ॥ ಅಪ ಮೃತ್ಯುವಿನ ತರಿದೆ । ಯೆನ್ನೊಳಗಿದ್ದ । ಅಪರಾಧಗಳ ಮರದೆ । ಚಪಲ ಚಿತ್ತನಿಗೊಲಿದ್ವಿಪುಲ ಮತಿಯನಿತ್ತು । ನಿಪುಣಾನೆಂದೆನಿಸಿದೆ ತಪಸಿಗ ಳಿಂದಲಿ ॥ ಕೃಪಣವತ್ಸಲ ನಿನ್ನ ಕರುಣೆಗೆ । ಉಪಮೆಗಾಣೆನು ಸಂತತವು ಕಾ । ಶ್ಯಪಿಯೊಳಗೆ ಬುಧರಿಂದ ಜಗದಾ । ಧಿಪನ ಕಿಂಕರನೆನಿಸಿ ಮೆರದೆ ॥ ॥ ೨ ॥ ಎನ್ನ ಪಾಲಿಸಿದಂದದಿ । ಸಕಲ ಪ್ರ । ಪನ್ನರ ಸಲಹೋ ಮೋದಿ । ಅನ್ಯರಿಗೀಪರಿ ಬಿನ್ನಪಗೈಯೇ ಜ । ಗನ್ನಾಥವಿಠಲನ ಸನ್ನುತಿಸುವ ಧೀರ ॥

ನಿನ್ನ ನಂಬಿದ ಜನರಿಗೀಹರಿ। ಬನ್ನವೇ ಭಕ್ತಾನುಕಂಪಿ ಶ। ರಣ್ಯ ಬಂದೊದಗೀಸಮಯದಿ ಅ। ಹರ್ನಿಶಿ ಧ್ಯಾನಿಸುವೆ ನಿನ್ನನೂ ॥ ೩ ॥ ಶ್ರೀಃ ॥

## ೧೯. ರಾಗ ಕಾಂಬೋಧಿ, ಝಂಪೆತಾಳ.

ನಿನ್ನ ಸಂಕಲ್ಪಾನುಸಾರ ಮಾಡೋ। ಎನ್ನ ಸಾಕುವ ಧೊರೆಯೆ ತಿಳಿದು ನೀ ನೋಡೋ ॥ ಪಲ್ಲ ॥ ಪಾತ್ರನೆಂದೆನಿಸೊ ಬಹು। ಪಾಪಾತ್ಮನೆಂದೆನಿಸೊ। ಶ್ರೋತ್ರಿಯನೆಂದೆನಿಸೊ ಶುಂಠನೆನಿಸೋ ॥ ಪುತ್ರಮಿತ್ರಾದ್ಯರಿಂ ಬಯಸಿ ಪೂಜೆಯ ಗೈಸೊ। ಕರ್ತೃ ನೀ ಜಗಕೆ ಸರ್ವತ್ರ ವ್ಯಾಪಕನ್ನೇ ॥ ॥ ೧ ॥ ಜನರೊಳಗೆ ನೀನಿದ್ದು। ಜನ್ಮಜನ್ಮಗಳಲ್ಲಿ। ಗುಣಕಾಲಕರ್ಮ ಸ್ವಭಾವಂಗಳಾ ॥ ಅನುಸರಿಸಿ ಪುಣ್ಯಪಾಪಗಳ ಮಾಡಿಸಿ ಫಲಗ। ಳುಣಿಸಿ ಮುಕ್ತರ ಮಾಡಿ ಪೊರವೆ ಕರುಣಾಳೋ ॥ ೨ ॥ ಯಾತಕೆನ್ನನು ಇನಿತು। ದೂರಕನ ಮಾಡುವಿ ಧ। ರಾತಳದೊಳನುದಿನದಿ ಮಾಯಾಪತೇ ॥ ಭೀತಿಗೊಂಬುವನಲ್ಲ ಭಯನಿವಾರಣ ಜಗ। ನ್ನಾಥವಿಠ್ಠಲ ಜಯಪ್ರದನೆ ಜಗದೀಶಾ ॥ ೩ ॥ ಶ್ರೀಃ ॥

## ೨೦. ರಾಗ ಕಾಂಬೋಧಿ, ಝಂಪೆತಾಳ.

ಗತಿಯಾವುದೆನಗೆ ಶ್ರೀಪತಿಯೆ ಪೇಳೋ। ಮತಿಗೆಟ್ಟು ಸತತ ಪರಸತಿಯರನು ಬಯಸುವೆನು ॥ ಪಲ್ಲ ॥ ಮರುಳು ಬುದ್ಧಿಗಳಿಂದ। ಕರಸೂಚನೆಯ ಮಾಡಿ। ತರುಣಿಯರ ತಕ್ಕೈಸಿ ಸರಸವಾಡಿ ॥ ಇರುಳೂ ಹಗಲು ಹೀಗೆ। ದುರುಳತನದಲಿ ತಿರುಗಿ। ಧರೆಯೊಳಗೆ ನಾನೊಬ್ಬ ಹರಿದಾಸನೆನಿಸುವೆನು ॥ ೧ ॥ ನಾಚಿಕಿಲ್ಲದಲೆ ಬಲು। ನೀಚರಲ್ಲಿಗೆ ಪೋಗಿ। ಯಾಚಿಸುವೆ ಸನ್ಮಾರ್ಗ ಯೋಚಿಸದಲೇ ॥ ಆಚತುರ್ದಶ ವರುಷ। ದಾರಭ್ಯ ಈವಿಧದಿ। ಆಚರಿಪೆನ್ನೈ ಸವ್ಯಸಾಚಿಸಖ ಶ್ರೀಕೃಷ್ಣ ॥ ೨ ॥ ನಾನು ನನ್ನದು ಯೆಂಬ। ಹೀನಬುದ್ಧಿಗಳಿಂದ। ಜ್ಞಾನಶೂನ್ಯಾನಾದೆ ದೀನಬಂಧೋ ॥ ಸಾನುರಾಗದಿ ಒಲಿದು। ನಾನಾ ಪ್ರಕಾರದಲಿ। ನೀನೆ ಕರುಣಿಸು ಹರಿಯೆ ಜ್ಞಾನಗುಣಪರಿಪೂರ್ಣ ॥ ೩ ॥ ಅಂಬುಜಾಕ್ಷನೆ ನಿನ್ನ। ನಂಬಿ ಭಜಿಸುವರ ಪಾ। ದಾಂಬುರುಹಕೆರಗದಲೆ ಸಂಭ್ರಮದಲೀ ॥ ತಂಬೂರಿಯನು ಪಿಡಿದು।

ಡಂಭತನದಲಿ ನಾನು । ಶಂಬರಾರಿಗೆ ಸಿಲ್ಕಿ ಬೆಂಬಿಡದೆ ಚಾಲ್ವರಿದೆ ॥ ೪ ॥ ಪರಮೇಷ್ಠಿಯಾರಭ್ಯ । ತೃಣಜೀವಪರಿಯಂತ । ತರತಮವ ತಿಳಿಸಿ ತರುವಾಯದಲ್ಲಿ ॥ ಗುರುಹಿರಿಯರಲಿ ಭಕುತಿ । ವೈರಾಗ್ಯವನು ಕೊಟ್ಟು । ಗುರುಜಗನ್ನಾಥವಿಟ್ಠಲ ನಿರುತ ಪೊರೆಯದಿರೆ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ತೋಡಿ, ಅಟತಾಳ.

ಅನೆಂತು ತುತಿಪೆ ನಿನ್ನಾ । ಶ್ರೀಗುರು ರನ್ನಾ । ಅನೆಂತು ತುತಿಪೆ ನಿನ್ನಾ ॥ ಪಲ್ಲ ॥ ಅನೆಂತು ತುತಿಪೆ ಪಂಚಾನನಸುತ ಪವ । ಮಾನ ಹನುಮ ಭೀಮ ಆನಂದತೀರ್ಥನೇ ॥ ಅನುಪಲ್ಲ ॥ ಸನಕಸನಂದನ ಸನತಕುಮಾರಾದಿ । ಮುನಿಗಳು ಹರಿದರುಶನವ ಮಾಡುವೆನೆಂದು । ಘನ ಹರುಷದಿ ಮೋಕ್ಷವನು ಕುರಿತು ಬಂದೊ । ಡನೆ ಬಾಗಿಲಲ್ಲಿ ನಿಲ್ಲೆನಲು ಜಯವಿಜಯ । ರನ ನೋಡಿ ಎರಡೊಂದು ಜನುಮದಲಿ ಕ್ರೂರ । ದನುಜಕುಲದಲಿ ಜನಿಸಿರೆಂದೆನೆ ಸಿರಿ । ವನಜಾಕ್ಷವರಗೋಸ್ಕರಾ ॥ ಅವತರಿಸಿ । ಗುಣಪೂರ್ಣ ಗುರು ಸಮೀರಾ । ಸೇವಿಪೆನೆಂದಾ । ಕ್ಷಣದಿ ಜನಿಸಿ ವಾನರಾ । ರೂಪಿಲಿ ಭು । ವನದೊಳು ಮೆರದೆ ಅಸಮ ಶೂರಾ ಹರಿವರಾ ॥ ೧ ॥ ಕೋತಿ ಕಟಕಮಾಡಿ । ಜಾತರಹಿತಹರಿ । ಗೇ ತಲೆಬಾಗಿಸುಪ್ರೀತಿಯಿಂದಲಿ ರವಿ । ಜಾತನ ಸಲಹಿ ಅತೀ ತೀವ್ರದಿಂದಲಿ । ಸೀತೆಯ ಕ್ಷೇಮವ ದೂತ ಪೇಳುವೆನೆಂದು । ವಾತವೇಗದಿ ವನಧಿಯ ತಡಿಲ್ಲದೆ ದಾಟಿ । ಮಾತೆಗುಂಗುರವಿತ್ತಶೋಕತರುಗಳ । ಭೀತಿಬಡದಲೆ ಕಿತ್ತಿ ॥ ರೋಷ ಖಳ । ವ್ರಾತವೆಲ್ಲವನುಗ್ಗೊತ್ತೀ । ಲಂಕಾಪುರ । ಜಾತವೇದಸಗೆ ಇತ್ತೀ । ಹನುಮ ಶಿರಿ । ನಾಥನಿಗೆರಗಿ ಪಡದೆ ಬಹುಕೀರ್ತಿ ॥ ॥ ೨ ॥ ದುರುಳ ಕಲ್ಯಾದ್ಯರು ಉರುವಿಯೊಳ್ಪುಟ್ಟಿ ಸಂ । ಚರಿಸುತ್ತ ಇರಲಾಗಿ ಮರುತದೇವನು ಅವ । ತರಿಸಿ ಅವನಿಯೊಳು ದುರಿಯೋಧನನುಣಲಿತ್ತ । ಗರಳವ ಭುಂಜಿಸಿ ಆರಗಿನ ಸದನದಿ । ಪುರೋಚನಾದಿಗಳನ್ನುಉಗುಹಿ ಏಕಚಕ್ರಾ । ಪುರದಲ್ಲಿದ್ದ ಬಕಾಸುರನ ಸದೆದು ಭೂಮಿ । ಸುರ

ವೇಷವನೆ ಧರಿಸಿ॥ ಪಾಂಚಾಲಿ ಸ್ವ। ಯಂವರ ಪತಿಕರಿಸಿ। ಮಾಗಧದೇಶ। ದರಸನ ಸಂಹರಿಸೀ। ರಾಜಸೂಯಜ್ಞ। ಹರಿಗೆ ಅರ್ಪಿಸಿದಿ ಮೆರಿಸೀ ॥ ೩ ॥ ಭಕತಳಾದ ,ಇಂದುಮುಖಿ ದ್ರೌಪದಿಗೆ ಸೌಗಂ। ಧಿಕವ ತರುವೆನೆಂದು ವೃಕೋದರ ಪೋಗಲು। ಅಕುಟಿಲ ಹನುಮಂತನನು ಅವಲೋಕಿಸ್ಯಂ। ಜಿಕೆಯಿಂದ ನಿಂದು ಮಾರಕ ಜನರಿಗೆ ಮೋ। ಹಕವ ತೋರಿಸಿ ಕುಪಥ ಖಳರನೊರಸಿ ನೀ। ಸಖಿಗೆ ಪೂವಿತ್ತು ಗುರುಕುಮಾರನಸ್ತ್ರಕ। ಳುಕದೆ ಯುದ್ಧವ ಮಾಡಿದೆ ॥ ದುಶ್ಯಾಸನ। ರಕುತವರಿಸಿ ಕುಡಿದೆ। ಉಭಯು ಗಳ।ರಥಿಕರಬಲ ಕರೆದೆ। ಭಯುದಲಿ ಉ। ದಕದಲಿರ್ದ ದುರ್ಯೋಧನನೂ ರುಕಡಿದೇ ॥ ೪ ॥ ಭೀಮ ಭಯಂಕರ ಕಾಮುಕೋಟಿಚಲ್ವ। ಧೀಮಂತಜನ ಮನೋ ಪ್ರೇಮಪಾವನ ಗುಣ। ಸ್ತೋಮ ಸರ್ವಾಧಾರ ಭ್ರಾಮುಕಜನವ ನ। ಧೂಮಕೇತವೆ ಸರ್ವಾಸೀಮ ಸೌಖ್ಯಪೂರ್ಣ। ಸೋಮಾರ್ಕಸುರಪತಿ ಸಾಮಜ ಹರಿಗುರು। ರೋಮಕೋಟೀಶ್ವರ ಶ್ರೀಮಾನ್ಯ ಭಕತ ಲ। ಲಾಮ ಅಮಲಚರಿತಾ ॥ ಸುರಸಾರ್ವ। ಭೌಮ ಭವ್ಯಚರಿತಾ। ಸೋಮ ಕುಲ। ಸೋಮ ಸುಖಭರಿತಾ। ಭಕತಪ್ರೀತಾ। ಹೇಮುವರ್ಣಕಾಯ ಹಿತದಿಂದ ನಿರುತಾ ॥ ೫ ॥ ಮಣಿಮಂತನೆಂಬನವನಿಯೊಳು ಪುಟ್ಟಿ ವೇ। ನನಮತ ಪಿಡಿದು ಜೀವನೆ ಪರಮಾತ್ಮನೆಂ। ದೆನುತ ಸ್ಥಾಪಿಸಿ ಪಣೆಗಣ್ಣ ನೊರದಿಂದ। ಅನಿಮಿಷರೆಲ್ಲರು ವನಜಜಗುಸುರಲು। ಮುನಿಗಳು ಸಹ ನಾರಾಯಣನ ಪದಕೆ ದಂಡ। ಪ್ರಣಮುವ ಮಾಡಿ ಸ್ತೋತ್ರ ವಿನಯದಿ ಗೈಯೆ। ಅನಿಲನ ಅವಲೋಕಿಸಿ ॥ ಪೇಳಲು ಹರಿ। ಮನಭಾವವನು ಗ್ರಹಿಸಿ। ಮಧ್ಯಗೇಹ। ಮನೆಯೊಳಗವತರಿಸಿ। ಮೆರದೆ ಗುರು। ಅನುಗಾ ಲದಲಿ ನಿನ್ನ ಗುಣಗಳಾಶ್ರೈಸೀ ॥ ೬ ॥ ವಾಸುದೇವನೆಂಬ ಭೂಸುರನಾ ಮದಿ। ಲೇಸಾಗಿ ಚರಿಸಿ ಸಂತೋಷಿತರಾಗಿ ಸ। ನ್ಯಾಸಾಚ್ಯುತಪ್ರೇಕ್ಷ ರಾ। ಕರಸರಸಿಜ। ದೀ ಸಂತೋಷದಿ ಕೊಂಡು ಆಸಂಕರನ ಭಾಷ್ಯ। ದೂಷಿಸೆ ಗುರುಗಳುಲ್ಲಾಸಸನ್ಮುಖದಲಿ ವಿ। ಶೇಷವಿಂದಲಿ ವಿರಚಿಸುವ ದೆನಲು ಉ। ಲ್ಲಾಸದಿಂದಲಿ ಕೇಳೀ ॥ ಆಕ್ಷಣದಿ ಸಂ। ತೋಷ ಮನದಲಿ ತಾಳೀ। ಮೋಹಕವ ಪರಿಹರಿಸಿ ಅರ್ಥ ಪೇಳೀ। ಭೂ ಸುಜನರ ॥ ಆಶೆ

ಪೂರೈಸಿದ ಘನ ನಿನ್ನ ಲೀಲೀ ॥ ೭ ॥ ತರಳತನದಲಿ ಬದರಿಗೈದಿ ಪಾರಾ। ಶರನಾರಾಯಣನ ಸಂದರುಶನಕೊಂಡು ತೀ। ವರದಿಂದ ಹರಿತತ್ವ ನಿರ ಣಯಶಾಸ್ತ್ರವ। ವಿರಚಿಸುವದಕಿನ್ನು ವರವ ಪಡೆದು ಬಂದು। ಎರಡೇಳು ಆರೊಂದು ದುರುಳ ಭಾಷ್ಯಗಳೆಂಬ। ಗರಳ ತರುಗಳ ಮುರಿದಿಕ್ಕಿ ನೀ ಮೂವ। ತ್ತೆರಡ್ಯೈದು ಗ್ರಂಥಗಳ ॥ ನಿರ್ಮಿಸಿ ವಿಬು। ಧರಿಗೆಲ್ಲ ಪೇಳಿ ವ್ಯಾಳ। ಭೂಷಣದೇವ। ಪರನೆಂಬ ಯುಕುತಿ ಜಾಲ। ಹರಿದು ಹರಿ। ಪರ ಶ್ರೀಬೊಮ್ಮಾದ್ಯರಿ ಗುರುಗಳೆಂದೆನಲಾ ॥ ೮ ॥ ನಮೋ ನಮೋ ಸವಿಸ್ತಾರಣ ನಮೋ ಶ್ರೀಮುಖ್ಯಪ್ರಾಣ। ನಮೋ ನಮೋ ದಯಾಸಿಂಧು ನಮೋ ಭಕ್ತಜನಬಂಧು। ನಮೋ ನಮೋ ಗುಣಶೀಲ ನಮೋ ಭಾರತೀ ಲೋಲಾ। ನಮೋ ನಮೋ ಭವ್ಯಾಂಗ ನಮೋ ಅರಿಗಜಸಿಂಗ। ನಮೋ ನಮೋ ಜಗದ್ವ್ಯಾಪ್ತ ನಮಿತಜನರಾಪ್ತ। ನಮೋ ನಮೋ ಸುಖತೀರ್ಥ ನಮೋ ಮೂಲೋಕದ ಕರ್ತ। ನಮೋ ಗುರುಕುಲತಿಲಕ ॥ ಪಾಲಿಸು ಯೆನ್ನ। ತಮಹರ ದೂರಶೋಕಾ। ಸಜ್ಜನರಿಗೆ। ಅಮಿತ ಮೋದದಾ ಯಕ। ಶ್ರೀಭೂದುರ್ಗಾ ॥ ರಮಣ ಜಗನ್ನಾಥವಿಠಲ ಭಕ್ತಾಧಿಕಾ ॥ ೯ ॥

## ೨೨. ರಾಗ ಪಂತುವರಾಳಿ, ಆದಿತಾಳ.

ಬಾ ವೆಂಕಟಶೈಲಾಧಿಪ ಮನ್ಮನಕೆ। ತಡಮಾಡುವದ್ಯಾಕೆ। ಶ್ರೀವ ಲ್ಲಭ ನಾ ನಿನ್ನಂಘ್ರಿಕಮಲಕೆ। ನಮಿಸುವೆ ಪ್ರತಿಕ್ಷಣಕೆ ॥ ಪಲ್ಲ ॥ ನೀ ಪೊಲಿದೆನ್ನ ದಯಾವಲೋಕನದಿ। ಪಾವನಮಾಡಲು ದೇವವರೇಣ್ಯ ॥ ॥ ಅನುಪಲ್ಲ ॥ ವೈಕುಂಠಾಧೀಶ ವಿಗತಕ್ಲೇಶ। ಚಿತ್ಸುಖಮಯವಪುಷ। ಆಕಾಶವತ್ಸರ್ವತ್ರಾವಕಾಶ। ಶ್ರೀವೆಂಕಟೇಶ ॥ ಶ್ರೀಕಮಲಜಭವಪಾಕಹ ಮದನದಿ। ವಾಕರಪ್ರಮುಖದಿವೌಕಸವರದಾ ॥ ೧ ॥ ಸೋಮಾರ್ಕಾನಲ ಸಂಕ್ರಮುಖತುರಕ್ಷ। ಸಿತಾಸಿತಪಕ್ಷ। ನಾಮಾಭಿಧೇಯ ಲೋಕಾ ಧ್ಯಕ್ಷ। ಕಮಲಾಯತಾಕ್ಷ ॥ ಸೋಮ ಭೀಮ ನಿಸ್ಸೀಮಮಹಿಮ ತ್ರಿ। ಧಾಮಾ ರಾಮಾ ಘನಶ್ಯಾಮ ಲಲಾಮಾ ॥ ೨ ॥ ಮಮ ಸರ್ವಸ್ವಾಮಿ ಮದಂತರ್ಯಾಮಿ। ಸರ್ವಾಂತರ್ಯಾಮಿ। ಅಮಿತಾತ್ಮ ನಿರ್ಗುಣ ನೀ

ನಿಷ್ಕಾಮಿ । ಸೇವಿತಶ್ರೀಭೂಮಿ ॥ ಶಮಲವಿವರ್ಜಿತ ಅಮಿತಸುಗುಣ ಪೂರ್ಣ । ಅಮಲಮಹಿಮಾ ಖಳದಮನ ದಯಾಳೋ ॥ ೩ ॥ ಪವನಾಂತರಾತ್ಮಾ ನಿರ್ಮಲಾತ್ಮಾ । ಪರಮಾತ್ಮಾ ಜ್ಞಾನಾತ್ಮಾ । ಅವಿಕಾರಾ ಅತಿರೋಹಿತ ಭೂತಾತ್ಮಾ । ಪೂತಾತ್ಮಾ ಮಹಿತಾತ್ಮಾ ॥ ತ್ರಿವಿಧಜೀವರಿಗೆ ವಿವಿಧ ಫಲಂಗಳ । ತವಕದಿ ಕೊಟ್ಟವರವರನೆ ಪಾಲಿಸೋ ॥ ೪ ॥ ವೇದಸ್ತೇಯಾರಿ ಮಂದರಧಾರಿ । ಭೂವರ ನರಹರಿ । ಭೂದಾನವ ಬೇಡಿದ ಚಾಪಕುಠಾರಿ । ರಾವಣಕುಲವೈರಿ ॥ ಯಾದವವಂಶಮಹೋದಧಿಚಂದಿರ । ಸಾದಿತತ್ರಿಪುರಖಳೋದರ ಪಾಹಿ ॥ ೫ ॥ ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ । ಲೋಕೈಕಸಮರ್ಥ । ವೃಷ್ಣೀಶಾ ವೃಂದಾರಕರಿಪುಹರ್ತಾ । ಮುಕ್ತರ ಪುರುಷಾರ್ಥಾ ॥ ಹೃಷ್ಟಪುಷ್ಟಪರಮೇಷ್ಠಿಜನಕ ಶಿ । ಷ್ಟೇಷ್ಟ ಹೃಷ್ಟ ಅನಿವಿಷ್ಟನಿವಿಷ್ಟ ॥ ೬ ॥ ದಯದಿಂದ ನೋಡೋ ದೀನೋದ್ಧಾರ । ಸದ್ಗುಣಗಂಭೀರ । ಪ್ರಿಯ ನೀನೆ ಯೆನಗೆ ಲೋಕೋದ್ಧಾರ । ಸೌಂದರ್ಯ ಸಾರಾ ॥ ಹಯಮುಖ ಲೋಕತ್ರಯಪ ತ್ರಯೀಮಯ । ವಯನಗವ್ಯ ನಾ ಬಯಸುವೆ ನಿನ್ನಾ ॥ ೭ ॥ ಬಹುಮಾತುಗಳ್ಯಾಕೋ ಭವಭಯಹಾರಿ । ಬಿನ್ನೈಸುವೆ ಶೌರಿ । ವಿಹಿತಾವಿಹಿತಗಳು ನಿನ್ನನು ಮೀರಿ । ಮಾಳ್ಪೆನೆ ಕಂಸಾರಿ ॥ ಮಹಿತಶಮಲ ಸದ್ರಹಿತ ಲಕುಮಿ ಭೂ । ಸಹಿತ ಮನದಿ ಸನ್ನಿಹಿತನಾಗಲು ॥ ೮ ॥ ದಾತಾ ನೀನಲ್ಲದೆ ಅನ್ಯರನರಿಯೇ । ಕಂಡವರನು ಕರಿಯೇ । ಪ್ರೀತಾ ನೀನಾಗೆನ್ನೊಳು ಶ್ರೀಹರಿಯೇ । ಮೂಲೋಕದ ಧೊರಿಯೇ ॥ ಶ್ರೀತರುಣಿಯಃಗೂಡೀತನು ಸದನಕೆ । ನೀ ತ್ವರಿತದಿ ಜಗನ್ನಾಥವಿಟ್ಠಲಾ ॥ ೯ ॥ ಶ್ರೀಃ ॥

## ✓೨೩. ರಾಗ ಪಂತುವರಾಳಿ, ಆದಿತಾಳ.

ಬಯಸದಿರಹಿಕಸುಖಗಳನುದಿನ ನಿ । ರ್ಭಯದಿ ಭಜಿಸು ಹರಿಯ ॥ ವಯನಗವ್ಯ ವಾಂಛಿತಫಲಗಳ ಸ । ದ್ದಯದಿ ಕೊಡುವದರಿಯ ॥ ಪಲ್ಲ ॥ ಭೂರುಹವ್ಯಗಪಶುವಾಗಿ ಖೇಚರಶ । ರೀರಗಳಲಿ ಬಂದೇ । ಮಾರಿಮಸಣಿ ಭಿಕಾರಿ ಭವಮಲನಿಗ । ಳಾರಾಧಿಸಿ ನೊಂದೇ ॥ ನಾರಾಯಣ ಪಾದಾರವಿಂದ

ಯುಗ। ಳಾರಾಧನೆ ಒಂದೇ। ತಾರಿಸುವದು ಸಂಸಾರಶರಧಿ ಸುಖ। ತೋರುವದೋ ಮುಂದೇ। ೧॥ ಅನಿರುದ್ಧನು ನಿಜವನಿತೆ ಸಹಿತ ತಾ। ಧನಧಾನ್ಯದೊಳಿಪ್ಪಾ । ಅನುಬಂಧಿಗಳೊಳು ಕೃತಿಪತಿ ಪ್ರದ್ಯು। ಮ್ನನು ಸುಖಗಳ ತೋರ್ಪಾ ॥ ಗುಣವಂತರೊಳು ಜಯಾಪತಿ ಸಂಕ। ರ್ಷಣ ಕರ್ಮವ ಮಾಳ್ಪಾ। ಕುನರರು ಮಾಡುವ ಧರ್ಮಕರ್ಮಗಳ । ಕೊನೆಗೆ ತಾನು ಒಪ್ಪಾ ॥ ೨ ॥ ವಾಸುದೇವ ವಿಜಯಪ್ರದನಾಗೀ। ನರರ ಶರೀರದೊಳಾ। ವಾಸವಾಗಿ ಮಾಯಾಪತಿ ಸರ್ವದ । ಕ್ಲೇಶಾಪುಣ್ಯಗಳ ॥ ತಾ ಸಮುನಿಸುವನು ಸಂದೇಹಿಸದಿರು । ಆಶಾಪಾಶಗಳ । ತಾ ಸಡಿಲಿಸುವನು ಪ್ರತಿಪ್ರತಿಕ್ಷಣ ಕರು। ಣಾಸಮುದ್ರಕೇಳಾ ॥ ೩ ॥ ನಾರಾಯಣ ತನ್ನಾರಾಧಿಪರಿಗೆ। ದೂರಗೈದು ದುರಿತಾ। ಕಾರುಣಿಕ ಕೈವಲ್ಯಪ್ರದಾಯಕ। ತೋರುವ ಸರ್ವಜಿತ ॥ ಹಾರೈಸದಿರಲ್ಪಾಹಿಕ ಸುಖವನು । ನರಕದ್ವಾರ ನಿರತಾ। ಸೂರಿಗಳನು ಸಂಸೇವಿಸು ಮುಕ್ತಿಗೆ। ದ್ವಾರವಹುದು ಸತತಾ।॥ ೪॥ ಪಂಚರೂಪ ಪರಮಾತ್ಮನು ತಾ ಪ। ಪ್ರಂಚರೂಪದಿ ಪೊರೆವಾ। ಪಂಚಜ್ಞಾನಕರ್ಮೇಂದ್ರಿಯಜನ್ಯಾ ದ್ವಿ।ಪಂಚಪಾತಕ ತರಿವಾ॥ ಸಂಚಿತ ಆಗಾಮಿಗಳಪರಾಧವ। ಮುಂಚಿನವರಿಗೀವಾ।ವಾಂಛಿತಪ್ರದ ಜಗನ್ನಾಥವಿಠಲನು ಮಿಂಚಿನಂದದಿ ಪೊಳೆವಾ॥ ೫॥ ಶ್ರೀಃ ॥

೨೪. ರಾಗ ಕರಹರಪ್ರಿಯ, ಆದಿತಾಳ.

ಕಂಡೆ ಪಂಢರಿರಾಯನಾ । ತನ್ನನು । ಕೊಂಡಾಡುವರ ಪ್ರಿಯನಾ ॥ ॥ ಪಲ್ಲ ॥ ಸಮಚರಣಾಂಬುಜನಾ । ನಿಗಮಾ । ಗಮತತಿಗೋಚರನಾ॥ ಅಮಿತಪರಾಕ್ರಮನಾ । ರುಕ್ಮಿಣಿ । ರಮಣ ರವೀಕ್ಷಣನಾ ॥ ೧ ॥ ಕಾಮಿತಾರ್ಥಪ್ರದನಾ । ತುಲಸೀ । ದಾಮವಿಭೂಷಿತನಾ ॥ ಸಾಮಜ ಪತಿಪಾಲನಾ । ತ್ರಿಜಗ । ತ್ಸ್ವಾಮಿ ಚಿತ್ಸುಖಮಯನಾ ॥ ೨ ॥ ಗೋಕುಲ ಪೋಷಕನಾ। ಮುನಿಪುಂಡ। ಲೀಕಗೊಲಿದು ಬಂದನಾ ॥ ಲೋಕವಿಲಕ್ಷಣನಾ। ಶರಣರ । ಶೋಕವಿನಾಶಕನಾ ॥ ೩ ॥ ಚಂದ್ರಭಾಗವಾಸನಾ। ವಿಧಿವಿಹ। ಗೇಂದ್ರಮುಖಾರ್ಚಿತನಾ ॥ ಇಂದ್ರೋತ್ಪಲನಿಭನಾ । ಗುಣಗಣ । ಸಾಂದ್ರನುರೋತ್ತಮನಾ ॥ ೪ ॥ ಶ್ವೇತವಾಹನಸಖನಾ। ಸಲೆ ತಾರಿ। ಜಾತವ

ತಂದವನಾ ॥ ವೀತಶೋಕಭಯನಾ । ಶ್ರೀಜಗ । ನ್ನಾಥವಿಠಲರೇ
ಯನಾ ॥ ೫ ॥ ಶ್ರೀ ॥

## ೨೫. ರಾಗ ಪಂತುವರಾಳಿ, ಆದಿತಾಳ.

ಜಯರಾಯ ಜಯರಾಯ । ದಯವಾಗೆಮಗನುದಿನ ಸುಪ್ರಿಯ ॥ ॥ ಪಲ್ಲ ॥ ಸುರನಾಥನೆ ನೀ ನರನ ವೇಷದಿ । ಧರಣಿಯೊಳಗೆ ಅವತರಿಸಿದಿ ದಯದಿ ॥ ೧ ॥ ವಿದ್ವನ್ಮಂಡಲಿಸದ್ವಿನುತನೆ ಪಾ । ದದ್ವಯಕೆರಗುವೆ ಉದ್ಧರಿಸೆನ್ನನು ॥ ೨ ॥ ವಿದ್ಯಾರಣ್ಯನಾವಿದ್ಯಮತದ ಕು । ಸಿದ್ಧಾಂತಗಳ ಅಪದ್ಧವೆನಿಸಿದೆ ॥ ೩ ॥ ಅವಿದಿತನಾ ಸತ್ಕವಿಗಳ ಮಧ್ಯದಿ । ಸುವಿವೇಕಿಯು ಮಾಡವನಿಯೊಳೆನ್ನನು ॥ ೪ ॥ ಗುರುಪೂರ್ಣಪ್ರಜ್ಞರ ಸನ್ಮತವನು ಉ । ದ್ಧರಿಸಿ ಮೆರದೆ ಭೂಸುರವರವರದಾ ॥ ೫ ॥ ಸಭ್ಯರ ಮಧ್ಯದೊಳಭ್ಯಧಿಕವರಾ । ಕ್ಷೋಭ್ಯಮುನಿಕರಾಬ್ಜಾಭ್ಯುದಿತಗುರು ॥ ೬ ॥ ನಿನ್ನವರವನಾನನ್ಯಗನಲ್ಲ ಜ ॥ ಗನ್ನಾಥವಿಠಲನೆನ್ನೊಳಗಿರಿಸೋ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೬. ರಾಗ ಕಲ್ಯಾಣಿ, ಅಟತಾಳ.

ಭಾರತೀರಮಣಾ । ಮನ್ಮನದಲಿ । ತೋರು ತವ ಚರಣಾ ॥ ಪಲ್ಲ ॥ ಮೂರೇಳು ಸಾವಿರದಾರುನೂರು ಜಪ । ವೋರಂತೆ ಜಪಿಸಿ ಉದ್ಧಾರಮಾಡುವಿ ಯೆಮ್ಮಾ ॥ ಅನುಪಲ್ಲ ॥ ಮೂರುವಿಧಜೀವ । ರೊಳಹೊರ ನೀ । ಪ್ರೇರಕ ದೇವ ॥ ಮಾರರಮಣನ ನಿಜ । ಆರಾಧಿಪರೊಳ । ಗಾರು ನಿನಗೆ ಸಮ । ರೀರೇಳುಲೋಕದಿ ॥ ೧ ॥ ಲೋಕರೂಪನೆ । ಜಗದೊಳಗಾ । ನೇಕ ಚರಿತನೆ ॥ ನೀ ಕರುಣಿಸಲು ಪಿ । ನಾಕಿ ಸುರೇಂದ್ರ ದಿ । ವೌಕಸರೆಮ್ಮನು । ಸಾಕುವರನುದಿನ ॥ ೨ ॥ ಪ್ರಾಣ ಪಂಚಕ । ರೂಪಕ ದೈತ್ಯಶ್ರೇಣೀ ವಂಚಕ । ಕ್ಷೋಣಿಯೊಳಗೆ ಕೃಷ್ಣ । ವೇಣಿ ತರಂಗಿಣಿ । ತ್ರಾಣವಗೈದು ನಿ । ರ್ವಾಣಪ್ರದಾಯಕ ॥ ೩ ॥ ಚತುರವಿಂಶತಿ । ತತ್ವೇಶರ ಪತಿಯೇ ನೀನತಿ ॥ ನುತಿಪೆ ಉಪೇಂದ್ರ ಸು । ಯತಿಕರಪೂಜಿತ । ಖತಿಯ ಕಳದೆಮಗೆ । ಸ್ಥತಿಯಿತ್ತು ಸಲಹೋ ॥ ೪ ॥ ಭೂತತ್ರಯವಪುಷಾ ।

ಭವಿಷ್ಯತಿ । ಧಾತಾ ಗತದೋಷಾ ॥ ಮಾತರಿಶ್ವತನು । ಜಾತ ಹನುಮ ಜಗ । ನ್ನಾಥವಿಠಲನ । ಪ್ರೀತಿಲಿ ತೋರೋ ॥ ೫ ॥ ಶ್ರೀಃ ॥

## ೨೭. ರಾಗ ಭೈರವಿ, ತ್ರಿಪುಟತಾಳ.

ನೋಡಿದೇ । ವಿಠಲನ । ನೋಡಿದೆ ॥ ಪಲ್ಲ ॥ ನೋಡಿದೆನು ಕಂಗಳಲಿ ತನು ಪೀ । ಡಾಡಿದೆನು ಚರಣಾಬ್ಜದಲಿ ಕೊಂ । ಡಾಡಿದೆನು ವದನದಲಿ ವರಗಳ । ಬೇಡಿದೆನು ಮನದಣಿಯ ವಿಠಲನ ॥ ಅನುಪಲ್ಲ ॥ ಇಂದಿರಾ ವಲ್ಲಭನ ತಾವರೆ । ಗಂದನಂಜಿಸಿ ತಪತಪಾವೆಂ । ತೆಂದು ಪೇಳ್ದನ । ಯುವತಿವೇಷದಿ । ಕಂದುಕೊರಳನ ಸುತ್ತಿಸಿದನ ಪು ॥ ರಂದರಾನುಜನಾಗಿ ದಿವಿಯೊಳು । ಕುಂದದರ್ಚನೆಗೊಂಬ ಸನಕಸ । ನಂದನಾದಿ ಮುನೀಂದ್ರ ಹೃದಯ ಸು । ಮಂದಿರನ ಮಮ ಕುಲದ ಸ್ವಾಮಿಯ ॥ ೧ ॥ ಯಾತುಧಾನರ ಭಾರತಾಳದೆ । ಭೂತರುಣಿ ಗೋರೂಪಳಾಗಿ ಸ । ನಾತನನ ತುತಿಸಲ್ಕೆ ಶೇಷಫ । ಣಾತಪತ್ರನು ನಂದಗೋಪನಿ ॥ ಕೇತನದಲವತರಿಸಿ ವೃಷಬಕ । ಪೂತನಾದ್ಯರ ಸದೆದು ಬಹುವಿಧ । ಚೇತರಿಗೆ ಗತಿನೀಡಲೋಸುಗ । ಜಾತಕರ್ಮಗಳೊಹಿಸಿ ಮೆರದನ ॥ ೨ ॥ ತನ್ನ ತಾಯ್ತಂದೆಗಳ ಹೃದಯವೆ । ಪನ್ನಗಾರಿಧ್ವಜಗೆ ಸದನವೆಂ । ದುನ್ನತಭಕುತಿ ಭರದಿ ಆರ್ಚಿಪ । ಧನ್ಯಪುರುಷನ ಕಂಡು ನಾರದ ॥ ಬಿನ್ನಯಿಸಿ ತುತಿಸಲ್ಕೆ ಕೇಳಿ ಪ್ರ । ಪನ್ನವತ್ಸಲ ಬಿರಿದು ಮೆರೆಯಲು । ಜೊನ್ನೊಡಲುಭಾಗವಿ ನೆಲಸಿದ ಜ । ಗನ್ನಾಥವಿಟ್ಠಲನ ಮೂರ್ತಿಯ ॥ ೩ ॥ ಶ್ರೀಃ ॥

## ೨೮. ರಾಗ ಕಲ್ಯಾಣಿ, ಆದಿತಾಳ.

ಕಾಯೋ ಕಾಯೋ ರಂಗಾ । ಕಮಲಾಯತಾಕ್ಷಾ ॥ ಪಲ್ಲ ॥ ಕಾಯೋ ಕಾಯೋ ಕಮಲಾಯತಾಕ್ಷಾ ಭವ । ತೋಯದಲಿ ಬಿದ್ದು ಬಾಯ ಬಿಡುವೆನು ॥ ಅನುಪಲ್ಲ ॥ ಅದ್ವೈತತ್ರಯದಧ್ವಪ್ರವರ್ತಕ । ಸದ್ವೈಷ್ಣವರ ಪದದ್ವಯ ತೋರಿ ॥ ೧ ॥ ಸಂಜೆಯ ತೋರಿ ಧನಂಜಯನುಳುಹಿದ । ಕುಂಜರವರದ ನಿರಂಜನಮೂರ್ತೇ ॥ ೨ ॥ ಕುಕ್ಷಿಯೊಳಂದು ಪರೀಕ್ಷಿದ್ರಾಜನ । ರಕ್ಷಿಸಿದಂದದಿ ಪ್ರತ್ಯಕ್ಷದಲಿ ॥ ೩ ॥ ನೀ ದಯಮಾಡದಿರೀ

ದಿವಿಜರು ಪೊಲಿ । ದಾದರಿಸುವರೆ ವೃಕೋದರ ವಂದ್ಯಾ ॥ ೪ ॥ ಅಧ ಮನು ನಾನಹುದುದಧಿಮಥನ ಸ । ನ್ಮದಮುನಿಮತ ಪೊಂದಿದವರಣು ಗನಾ ॥ ೫ ॥ ಕ್ಷುದ್ರಭೂಮಿಪರುಪದ್ರವ ಕಳೆದು ಸು । ಭದ್ರವೀಯೊ ಕಲ್ಪ ದ್ರುಮದಂತೆ ॥ ೬ ॥ ಸತ್ಯಕಾಮ ತವ ಭೃತ್ಯಗೆ ಬಂದಪ । ಮೃತ್ಯು ಕಳೆದು ಸಂಪತ್ತು ಪಾಲಿಸಿದಿ ॥ ೭ ॥ ಎಲ್ಲರೊಳಿಹ ಕೈವಲ್ಯದರಸು ನೀ । ಬಲ್ಲಿದನೆಂಬುದು ಬಲ್ಲೆ ಬಹುಬಗೆ ॥ ೮ ॥ ವೀತಭಯ ಜಗನ್ನಾಥವಿಠಲ ಸು । ಖೇತರ ಕಳೆದು ಮಹಾತಿಶಯದಲಿ ॥ ೯ ॥ ಶ್ರೀಃ ॥

## ✓೨೯. ರಾಗ ನಾದನಾಮಕ್ರಿಯೆ, ಅಟತಾಳ.

ದಾಸರಾಯಾ । ಪುರಂದರ । ದಾಸರಾಯಾ ॥ ಪಲ್ಲ ॥ ದಾಸರಾಯಾಪ್ರತಿ । ವಾಸರದಲಿ ಶ್ರೀನಿ । ವಾಸನ್ನ ತೋರೋ ದ । ಯಾಸಾಂದ್ರ ಪುರಂದರ ॥ ॥ ಅನುಪಲ್ಲ ॥ ವರದನಾಮಕ ಭೂಮಿ । ಸುರನ ಮಡದಿಯು ಬ । ಸಿರಲಿ ಜನಿಸಿ ಬಂದು । ಮೆರದೆ ಧಾರುಣಿಯೊಳು ॥ ೧ ॥ ಕುಲಿಶಧರಾಹ್ವಯ । ಪೊಳಲೊಳು ಮಡದಿ ಮ । ಕ್ಕಳ ಕೂಡಿ ಸುಖದಿಂದ । ಕೆಲವು ಕಾಲದ ಲಿದ್ಯೋ ॥ ೨ ॥ ಮನೆ ಧನಧಾನ್ಯ ವಾ । ಹನ ವಸ್ತುಗಳನೆಲ್ಲ । ತೃಣಕೆ ಬಗೆದು ಕೃಷ್ಣಾ । ರ್ಪಣವೆಂದೆ ಬುಧರಿಗೆ ॥ ೩ ॥ ವ್ಯಾಸರಾಯರಲ್ಲಿ । ಭಾಸುರ ಮಂತ್ರೋಪ । ದೇಶವ ಕೊಂಡು ರ । ಮೇಶನ ವಲಿಸಿದ್ಯೋ ॥ ೪ ॥ ಪ್ರಾಕೃತಭಾಷೆಲಿ । ಈಕೃತಿಪೇಳಿ ಅ । ಪ್ರಾಕೃತ ಹರಿಯಿಂದ । ಸ್ವೀಕೃತ ನೀನಾದ್ಯೋ ॥ ೫ ॥ ತೀರ್ಥಕ್ಷೇತ್ರಂಗಳ । ಮೂರ್ತಿಮಹಿಮೆಗಳ । ಕೀರ್ತಿಸಿ ಜಗದಿ ಕೃ । ತಾರ್ಥನೆಂದೆನಿಸಿದೇ ॥ ೬ ॥ ಪಾತಕವನನಿಧಿ । ಪೋತನೆನಿಪ ಜಗ । ನ್ನಾಥವಿಠಲನ ಸಂ । ಪ್ರೀತಿಯ ಪಡದಿಯೋ ॥ ೭ ॥ ಶ್ರೀಃ ॥

## ೩೦. ರಾಗ ಕಾಂಬೋಧಿ, ಝಂಪೆತಾಳ.

ಹನುಮ ಭೀಮಾನಂದಮುನಿವರೇಣ್ಯಾ ॥ ತನುಮನದ ತಾಪಕಳೆದನುದಿನದಿ ಪಾಲಿಪುದೂ ॥ ಪಲ್ಲ ॥ ಪ್ರಾಣಪಂಚಕ ಸುಪರ್ವಾಣಗುರುವರ ಜಗ । ತ್ರಾಣ ತ್ರಯಿಮಯ ಪುರಾಣವೇದ್ಯಾ ॥ ಮಾಣದೆನ್ನಯ ಹೃದಯ ತಾಣದೊಳು ಅರಿ ಶಂಖ । ಪಾಣಿರೂಪನ ಬಿಡದೆ ಕಾಣಿಸು

ಕೃಪಾಸಿಂಧು ॥ ೧ ॥ ಸೂತ್ರನಾಮಕನೆ ತಾಪತ್ರಯಗಳಿಂದ್ಗಗಲು । ರಾತ್ರಿಯೊಳು ಬಳಲುತಿಹೆ ನಿತ್ರಾಣನಾ ॥ ಗಾತ್ರದಲಿ ನೆಲಸಿ ಸರ್ವತ್ರಪಾಲಿ ಸುಖವಿತ್ತು । ಶತ್ರುತಾಪಕನೆ ಗುಣಸ್ತೋತ್ರವನು ಕೈಕೊಂಡು ॥ ೨ ॥ ಅಸುನಾಥ ಶರಣಂಗೆ ವಶವಾಗು ಅನುದಿನದಿ । ಅಸುರಭಂಜನ ಜ್ಞಾನ ಸುಸುಖಾತ್ಮನೆ ॥ ಬಿಸರುಹಾಂಬಕ ಜಗನ್ನಾಥವಿಟ್ಠಲನ ಕೈ । ವಶಮಾಡಿ ಕೊಡುತಿಪ್ಪ ಶ್ವಸನಾವತಾರೀ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೩೧. ರಾಗ ಕಾಂಬೋಧಿ, ಝಂಪೆತಾಳ.

ಭಾರತೀರಮಣ ಭವಭಯಹರಣ । ದಾರಿತಾರಾತಿಸಂಘ ನಮಿಪೆನನವರತಾ ॥ ಪಲ್ಲ ॥ ಜ್ಞಾನಜ್ಞೇಯಜ್ಞಾತೃನಾಮಕ ರಮಾಪತಿಗೆ । ಧ್ಯಾನರೋತ್ತಮ ಕರ್ತೃಕರ್ಮಕರಣಾ ॥ ನೀನೆನಿಸಿ ತತ್ವದೇವತೆಗಳಿಂದೊಡಗೂಡಿ । ಪ್ರಾಣ ಪಂಚಕರೂಪ ಜಗವ ಪಾಲಿಸುವೇ ॥ ೧ ॥ ಕಾರುಣ್ಯನಿಧಿಯೆ ಇಪ್ಪತ್ತೊಂದುಸಾವಿರದ । ಆರುನೂರು ಹಂಸಮಂತ್ರ ಜಪವಾ ॥ ಈರೇಳು ಲೋಕದೊಳು ಸರ್ವಜೀವರೊಳಿದ್ದು । ಈರೀತಿ ಮಾಳ್ಪೆನೆಂದೆಲ್ಲರಿಗೆ ತೋರ್ಪೆ ॥ ೨ ॥ ಉದ್ಧರಿಸಬೇಕು ಯಂತ್ರೋದ್ಧಾರ ಪ್ರಾಣ ಶ್ರೀ । ಮದ್ಧನುಮಭೀಮ ಗುರುಮಧ್ವಮುನಿಪಾ ॥ ಸಿದ್ಧಾಂತ ತತ್ವಜ್ಞ ಸದ್ವೈಷ್ಣವರ ಸಭಾ । ಮಧ್ಯದೊಳಗಸಮ ಸದ್ವಿದ್ಯಗಳನೊರೆದೆ ॥ ೩ ॥ ದಾಶರಥಿಪ್ರಿಯ ತವ ವಿಭೀಷಣನ ಮನದ ಅಭಿ । ಲಾಷೆಗಳನೆಲ್ಲ ಪೂರೈಸಿನಿಂದೆ ॥ ವ್ಯಾಸಮುನಿಹೃತ್ಕುಮುದಖೇಶ ಬಿನ್ನೈಪೆ ಸಂ । ತೈಸು ನಿನ್ನವರ ಭವಕ್ಲೇಶಗಳ ಕಳೆದು ॥ ೪ ॥ ಜ್ಞಾನಬಲಭಕ್ತಿವೈರಾಗ್ಯ ಅಪರೋಕ್ಷಪವ । ಮಾನ ನಿನ್ನವತಾರ ಅಂಶಗಳಲಿ ॥ ನ್ಯೂನವಿಲ್ಲದೆ ಜಗನ್ನಾಥವಿಟ್ಠಲನ ಆ । ಜ್ಞಾನುಸಾರದಲಿ ತವ ಚರಿತ ತೋರಿಸುವೆ ॥ ೫ ॥ ಶ್ರೀಃ ॥

೩೨. ರಾಗ ಕಾಂಬೋಧಿ, ಝಂಪೆತಾಳ.

ಅಪಮೃತ್ಯು ಪರಿಹರಿಸು ಅನಿಲದೇವಾ ॥ ಕೃಪಣವತ್ಸಲನೆ ಕಾಯ್ವರ ಕಾಣೆ ನಿನ್ನುಳಿದು ॥ ಪಲ್ಲ ॥ ನಿನಗಿನ್ನು ಸಮರಾರ್ಧ ಅನಿಮಿತ್ತ ಬಂಧುಗಳು ।

ಯೆನಗಿಲ್ಲ ಆವಾವ ಕಾಲದಲ್ಲಿ ॥ ಅನುದಿನವು ನೀನೆಮ್ಮದಾಪೇಕ್ಷನವಮಾಡು ವದು । ನಿನಗೆ ಅನುಚಿತವು ಸಜ್ಜನಶಿಖಾಮಣಿಯೇ ॥ ೧ ॥ ಕರಣಾಭಿ ಮಾನಿಗಳು ಕಿಂಕರರು ಮೂರ್ಲೋಕ । ಧೊರೆಯು ನಿನ್ನಾಧೀನ ಸರ್ವ ಕಾಲಾ ॥ ಪರಿಸರನೆ ಈಭಾಗ್ಯ ಧೊರೆತನಕೆ ಸರಿಯುಂಟೆ । ಗುರುವರಿಯ ನೀ ಕೃಪಾಕರನೆಂದು ಮರೆಹೊಕ್ಕೆ ॥ ೨ ॥ ಭವರೋಗವೋಚಕನೆ ಪವ ಮಾನರಾಯ ನಿ । ನ್ನವರವನು ನಾನು ಮಾಧವಪ್ರಿಯನೇ ॥ ಜವನ ಬಾಧೆಯ ಬಿಡಿಸು ಅವನಿಯೊಳು ಸುಜನರಿಗೆ । ದಿವಿಜಗಣಮಧ್ಯದಲಿ ಪ್ರವರ ನೀನಹುದಯ್ಯ ॥ ೩ ॥ ಜ್ಞಾನಾಯುರೂಪಕನು ನೀನಹುದು ವಾಣಿ ಪಂ । ಚಾನನಾದ್ಯಮರರಿಗೆ ಪ್ರಾಣದೇವಾ ॥ ದೀನವತ್ಸಲನೆಂದು ನಾ ನಿನ್ನ ಪ್ರಾರ್ಥಿಸುವೆ । ದಾನವಾರಣ್ಯ ಕೃಶಾನು ಸರ್ವದ ಯೆನ್ನ ॥ ೪ ॥ ಸಾಧನಶರೀರವಿದು ನೀ ದಯದಿ ಕೊಟ್ಟಿದ್ದು । ಸಾಧಾರಣವು ಅಲ್ಲ ಸಾಧು ಬಂಧು ॥ ವೇದವಾದೋದಿತ ಜಗನ್ನಾಥಶ್ರೀವಿಟ್ಠಲನ । ಪಾದಭಜನೆಯ ನಿತ್ತು ಮೋದ ಕೊಡು ಸರ್ವದಾ ॥ ೫ ॥ ಶ್ರೀಃ ॥

## x ೩೩. ರಾಗ ಪಂತುವರಾಳಿ, ಅಟತಾಳ.

ಸಾರಿದ ಡಂಗುರ ಯಮನು । ಪಾಪಿ । ನಾರಿಯರೆಳತಂದು ನರಕದೊ ಳಿಡಿರೆಂದು ॥ ಪಲ್ಲ ॥ ಹೊತ್ತಾರೆ ಎದ್ದು ಪತಿಗೆ ಎರಗದವಳ । ಮೃತ್ತಿಕೆ ಶೌಚಮಾಡದೆ ಇಪ್ಪಳಾ ॥ ಬತ್ತಲೆ ಕುಳಿತು ಮೈತೊಳೆವಳ ನಾದಿನಿ । ಅತ್ತೆಮಾವನ ಬೈವಳೆಳತನ್ನಿರೋ ಯೆಂದು ॥ ೧ ॥ ತಿಲಕಾಯುಧವ ಬಿಟ್ಟು ಕುಂಕುಮನಿಡುವಳ । ಬೆಳಗಾದ ಕಾಲಕ್ಕು ಮಲಗಿಪ್ಪಳಾ ॥ ಮಲಿನವಸ್ತ್ರವನುಟ್ಟು ಪತಿಸಂಗಮಾಳ್ಪಳ । ಕಲಹಕಾರಿಯ ಪಿಡಿದೆಳ ತನ್ನಿರೋ ಯೆಂದು ॥ ೨ ॥ ಉತ್ತಮಗುರುಹಿರಿಯರನು ನಿಂದಿಸುವಳ । ಪೆತ್ತ ಮಕ್ಕಳ ಮಾರಿ ಬದುಕುವಳಾ ॥ ಪ್ರತ್ಯೇಕ ಶಯ್ಯದಿ ಮಲಗಿಪ್ಪ ವಳಾ ಪಿಡಿ । ದೊತ್ತಿ ವದರಿ ಕೂಗಿ ಎಳದು ತನ್ನಿರೊ ಯೆಂದು ॥ ೩ ॥ ಜಲಜಕ್ಕಿಸಾಳಿಕಂಬಳಿಬೋಳಿಬಕ್ಕಿ ಗೊಂ । ದಲಿಮೊದಲಾದವು ದೈವ ವೆಂದು ॥ ತಿಳಿದು ಪಿಶಾಚಿಯೆಂಜಲ ಉಂಡು ಹಿಗ್ಗುವ । ಲಲನೇಕನಾ

ಲಸ್ಯಗೊಳದೆ ತನ್ನಿರೊ ಯೆಂದು ॥ ೪ ॥ ಒಲಿವ ಔಷಧ ಮಾಡಿ ಪತಿಯು ವಲಿಸುವಳ । ಮಲಮಕ್ಕಳೊಳು ಮತ್ಸರಿಸುತಿಪ್ಪಳಾ ॥ ಕಳವಿಲಿ ಕಾಂತನ ಧನವ ವಂಚಿಸುವಳ । ಗಳಕೆ ಪಾಶವ ಕಟ್ಟಿ ಎಳತನ್ನಿರೋ ಯೆಂದು ॥ ॥ ೫ ॥ ನಾಗೇಂದ್ರಶಯನನ ದಿನದಲಿ ಉಪವಾಸ । ಜಾಗರ ಮಾಡದೆ ಮಲಗಿಪ್ಪಳಾ ॥ ಭಾಗವತಾದಿಶಾಸ್ತ್ರವ ಕೇಳದೆ ಮತ್ತೆ । ಛಾಗಿ ತಿರುಗುವಳ ಎಳದುತನ್ನಿರೋ ಯೆಂದು ॥ ೬ ॥ ಉಡಲಿಲ್ಲ ಉಣಲಿಲ್ಲ ಇಡಲಿಲ್ಲ ತೊಡಲಿಲ್ಲ । ಸುಡಲಿ ಗಂಡನ ಒಗತನವೆನ್ನುತಾ ॥ ಹಡದವರನು ನುಡಿನುಡಿಗೆ ಬೈಯುತಲಿಪ್ಪ । ಕಡುಪಾಪಿಗಳ ಹೆಡಮುಡಿಕಟ್ಟಿ ತಾ ಯೆಂದು ॥ ॥ ೭ ॥ ಗಂಡನಿರ್ಧನಿಕನೆಂದಪಮಾನಮಾಳ್ಪಳ । ಉಂಡು ಶೇಷಾನ್ನವನುಣಿಸುವಳಾ ॥ ಕೊಂಡೆಮಾತುಗಳಿಂದ ಕಳವಳಗೊಳಿಪಳ । ಮಂಡೆಕೂದಲು ಹಿಡಿದೆಳದು ತನ್ನಿರೊ ಯೆಂದು ॥ ೮ ॥ ಸಾಲೆಡೆಗಳ ?ೀದಮಾಡಿ ಬಡಿಸುವಳ । ನೀಲಾಂಬರವನುಟ್ಟು ಮಡಿಯೆಂಬಳಾ ॥ ಬಾಲಕರನ ಬಡಿದಳಿಸುತಿಹಳ ಹಿಂ । ಗಾಲ ತೊಳೆಯದವಳೆಳತನ್ನಿರೋ ಯೆಂದು ॥ ೯ ॥ ಮಿಾಸಲ ಮಡಿ ಯೆನ್ನದಲೆ ಭಕ್ಷಿಸುವಳ ಸ । ಕೇಶಿಯೊಡನೆ ಗೆಳತನ ಮಾಳ್ಪಳಾ ॥ ದಾಸೆರಿಂದಲಿ ಶಾಕಪಾತ್ರೆ ಮುಟ್ಟಿಸುವಳ । ಪಾಶದಿಂದಲಿ ಬಿಗಿದೆಳದು ತನ್ನಿರೊ ಯೆಂದು ॥ ೧೦ ॥ ಪತಿಗೆ ಬೇಕಾದವರೊಳು ಮತ್ಸರಿಸುವಳ । ಮೃತವತ್ಸ ಗೋವಿನ ಪಾಲುಂಬಳಾ ॥ ಹುತವಹನನ ಪಾದತಳದಿ ನೊಂದಿಸುವಳ । ವ್ಯಥೆನೋಡದೆ ಬಿಡದೆಳದು ತನ್ನಿರೊ ಯೆಂದು ॥ ೧೧ ॥ ಮಿಥ್ಯಾವಾದಿಯ ಕೂಡ ಅತಿಸ್ನೇಹಮಾಳ್ಪಳಾ । ಸತ್ತವರ ನೆನದಳುತಿಪ್ಪಳಾ ॥ ದತ್ತಾಪಹಾರವ ಮಾಡುತಿಪ್ಪಳ ನೀಚ । ವೃತ್ತಿಲಿ ಬದುಕುವಳೆಳತನ್ನಿರೋ ಯೆಂದು ॥ ೧೨ ॥ ಲಶುನವೃಂತಾಕಾದಿಗಳನು ಭಕ್ಷಿಸುವಳಾ । ಸೊಸೆಯರೊಡನೆ ಮತ್ಸರಿಸುತಿಹಳಾ ॥ ಹಸಿದು ಬಂದವರಿಗೆ ಅಶನವಿಲ್ಲೆಂಬಳ । ಉಸುರು ಬಿಡದಂತೆ ಎಳದು ತನ್ನಿರೊ ಯೆಂದು ॥ ೧೩ ॥ ತುಲಸಿವೃಂದಾವನಕಭಿನಮಿಸದವಳ । ಜಲವ ಶೋಧಿಸವೆ ಪಾನವ ಮಾಳ್ಪಳಾ ॥ ಫಲಧಾನ್ಯಾದಿಗಳ ನೋಡದೆ ಪಾಕಮಾಳ್ಪಳ । ಗಳಕೆ ಪಾಶವ ಹಾಕಿ ಎಳತನ್ನಿರೋ ಯೆಂದು ॥ ೧೪ ॥ ಬಾಲಕರನು

ತೊಟ್ಟಿಲೊಳಗಿಟ್ಟು ತೂಗುತ । ಹಾಲೆರವುತ ಬೀಸುತ ಕುಟ್ಟುತಾ ॥ ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮೀ । ಲೋಲನ ಗುಣವ ಪಾಡುವರ ನೋಡದಿರೆಂದು ॥ ೧೫ ॥ ಅರಿಸಿನ ಕುಂಕುಮ ಪುಷ್ಪಾಂಜನ ವಸ್ತ್ರಾ । ಭರಣ ಭೂಷಿತರಾಗಿ ಪತಿಯೊಡನೆ ॥ ಸರಸವಾಡುತ ಸುಖ ಹರಿಗೆ ಸಮರ್ಪಿಸಿ । ಹರುಷಬಡುತಲಿಪ್ಪವರ ಮುಟ್ಟದಿರಿ ಯೆಂದು ॥ ೧೬ ॥ ಅಗಣಿತ ಮಹಿಮ ಶ್ರೀಜಗನ್ನಾಥವಿಠಲನ । ಹಗಲು ಇರುಳು ಬಗೆಬಗೆಯಿಂದಲಿ ॥ ಪೊಗಳುವ ದಾಸರ ಬಗೆಯುವರಾವಂಥ । ಸುಗುಣರಿದ್ದಡಿಗೆ ಕೈಮುಗಿದು ಬನ್ನಿರೋ ಯೆಂದು ॥ ೧೭ ॥ ಶ್ರೀಃ ॥

೩೪. ರಾಗ ಧನಾಶ್ರಿ, ಆದಿತಾಳ.

ಶ್ರೀನಿಕೇತನ । ಪಾಲಯ ಮಾಂ । ಶ್ರೀನಿಕೇತನ ॥ ಪಲ್ಲ ॥ ಜ್ಞಾನಗಮ್ಯ ಕರುಣಾನಿಧೇ ನಿನ್ನಡಿ । ಗಾನಮಿಸುವೆ ಪೊರೆ ದೀನದಯಾಳೂ ॥ ಅನುಪಲ್ಲ ॥ ಜ್ಞಾನವಮಾನದಾ । ಶರಣರ ಸುರ । ಧೇನು ಸರ್ವದಾ ॥ ನೀನೆಂದರಿತು ಸದಾನುರಾಗದಲಿ । ಧ್ಯಾನಿಸಿಪೆ ಮನದನುಮಾನವ ಕಳಿಯೋ ॥ ೧ ॥ ಶ್ರೀಕರಾರ್ಚಿತ । ಪಾದಾಬ್ಜ ಪ । ರಾಕು ವಂದಿತಾ ॥ ಶೋಕನಾಶನ ವಿಶೋಕ ಸುಲಭಹೃ । ದ್ವ್ಯಾಕುಲ ಕಳಿಯೋ ಕೃಪಾಕರ ಪೊಲಿದು ॥ ೨ ॥ ಪನ್ನಗಾಚಲ । ನಿವಾಸ ಪ್ರ । ಪನ್ನವತ್ಸಲಾ ॥ ಬಿನ್ನಪ ಕೇಳೋ ಜಗನ್ನಾಥವಿಠಲ । ಧನ್ಯನ ಮಾಡೋ ಶರಣ್ಯಶರಣನಾ ॥ ೩ ॥ ಶ್ರೀಃ ॥

೩೫. ರಾಗ ಭೈರವಿ, ಆದಿತಾಳ.

ರಾಮನ ನೋಡಿರೈ । ನಿಮ್ಮಯ । ಕಾಮಿತ ಬೇಡಿರೈ ॥ ಪಲ್ಲ ॥ ತಾಮರಸಸಖಸುವಂಶಾಬ್ಧಿಶರ । ತ್ಸೋಮ ಕಮಲಾಧಾಮ ॥ ಅನುಪಲ್ಲ ॥ ಧಾತನನುಜ್ಞದಿ ದೇವತ್ವಷ್ಟ್ರ ನಿರ್ಮಿಸಿದ । ಅಜಪೂಜಿಸಿದ । ಜ್ಯೋತಿರ್ಮಯ ಜಾಬಾಲಿಮುನಿಯ ತಪವರಿದ । ಕಾಮಿತನೆರದ । ಭೂತಾಧಿಪನ ಭವನದೊಳಗರ್ಚನೆಕೊಂಡ । ಧೃತಕೋದಂಡ ॥ ಮಾತಂಗಾರಿವಿರೋಧಿಯ ಜನಕನ ಮೋಧಾ । ಕಾರಕೆ ಪೋದ ॥ ೧ ॥ ಸೌಭರಿಮುನಿಪಗೆ ಸೌಖ್ಯವ ಕರುಣಿಸಿ ಕೊಟ್ಟ । ಜಗಕತಿಥಿಟ್ಟ । ನಾಭಿಜನ್ಮನಿಹ ನಗರಸ್ಥಾನಕೆ

ಬಂದ । ಶುಭಗುಣವೃಂದ । ವೈಭವದಿಂದ ಅಯೋಧ್ಯಾನಗರದಿ ಸೇರಿದ । ಕಾಮಿತಗರೆದ ॥ ಸಾಭಿಮಾನದಲಿ ಸತಿಯುಳಿಗಿತ್ತನು ವರವ । ದೇವರ ದೇವ ॥ ೨ ॥ ಜಾಂಬವಂತನಿಗೆ ಜಾನಕಿರಮಣನು ಇತ್ತ । ತನ್ನಯ ಧ್ಯಾತಾ । ಸಂಭ್ರಮದಿಂದಲಿ ವೇದಗರ್ಭನೊಡನಾಡ್ದ । ಮುಕ್ತಿಯ ನೀಡ್ದ । ಕುಂಭಿನೀಶ್ವರನ ಕೋಶದಿ ಬಹುದಿನ ವಾಸ । ಬೆಸಗಿದನೀಶ ॥ ನಂಬಿ ತುತಿಸುತಿಹ ನರಹರಿ ಮುನಿಪಗೆ ಒಲಿದ । ಮೋದದಿ ನಲಿದ ॥ ಅಲವಬೋಧಮುನಿ ಅತಿಮೋದದಲರ್ಚಿಸಿದ । ಸಲೆ ಮೆಚ್ಚಿಸಿದ । ಇಳೆಯೊಳು ಬಹು ಯತಿಗಳ ಕರಪೂಜಿತನಾದ । ಲೀಲವಿನೋದ । ಬಲು ನಂಬಿದ ಭಕತರ ಕಲಿಮಲಗಳ ಕಳೆದ । ಮನದೊಳು ಪೊಳೆದ ॥ ಸುಲಲಿತಗುಣನಿಧಿ ವಸುಧೇಂದ್ರಾರ್ಯರ ಪ್ರಿಯ । ಕವಿಜನಗೇಯ ॥ ೪ ॥ ವಾರಿಧಿಬಂಧನ ವಾನರನಾಯಕರಾಳ್ದ । ದೈತ್ಯರ ಸೀಳ್ದ । ನಾರದ ಮೊಖ ಮುನಿನಮಿತಪದಾಂಬುಜನೀತ । ತ್ರಿಗುಣಾತೀತ । ಆರಾಧಿಪರಿಗೆ ಅಖಿಳಾರ್ಥಗಳನು ಕೊಡುವ । ದುರಿತವ ತಡೆವ ॥ ನೀರಜಾಕ್ಷ ಜಗನ್ನಾಥ ವಿಠಲ ನಿಶ್ಚಿಂತ । ಸೀತಾಕಾಂತ ॥ ೫ ॥ ಶ್ರೀಃ ॥

॥ ಶ್ರೀಸುಧೀಂದ್ರಾರ್ಪಣಮಸ್ತು ॥

### ೩೬. ರಾಗ ಕೇದಾರಗೌಳ, ರೂಪಕತಾಳ.

ನೀಚನಲ್ಲವೆ । ಇವನು । ನೀಚನಲ್ಲವೆ ॥ ಪಲ್ಲ ॥ ಕೀಚಕಾರಿಪ್ರಿಯನ ಗುಣವ । ಯೋಚಿಸದಲೆ ಇಪ್ಪ ನರನು ॥ ಅನುಪಲ್ಲ ॥ ಶ್ರೀಕಳತ್ರನಂಘ್ರಿಕಮಲ । ವೇಕಚಿತ್ತದಲ್ಲಿ ಮನೋ ॥ ವ್ಯಾಕುಲಗಳ ಬಿಟ್ಟು ಸುಖೋ । ದ್ರೇಕದಿಂದ ಸ್ಮರಿಸದವನು ॥ ೧ ॥ ಲೋಕವಾರ್ತೆಗಳಲಿ ಏಡ । ಮೂಕನೆನಿಸಿ ವಿಷಯಗಳವ ॥ ಲೋಕಿಸದಲೆ ಶ್ರೀಶಗಿವು ಪ್ರ । ತೀಕವೆಂದು ತಿಳಿಯದವನೂ ॥ ೨ ॥ ಹರಿಕಥಾಮೃತವನು ಬಿಟ್ಟು । ನರಚರಿತ್ರೆಯಿಂದ ॥ ದುರ್ಗರಗಳಂತೆ ಹರಟೆ ದಿವಸ । ಬರಿದೆ ಕಳೆಯುತಿಪ್ಪ ಮನುಜ ॥ ೩ ॥ ಜನನಿಜನಕರಂತೆ ಜನಾ । ರ್ದನನನು ಸಲಹುತಿರಲು ಬಿಟ್ಟು ॥ ಧನಿಕರ ಮನೆಮನೆಗಳಲ್ಲಿ । ಶುನಕನಂತೆ ತಿರುಗುವವನು ॥ ೪ ॥ ವಿಹಿತಧರ್ಮ

ತೊರೆದು ಪರರ । ಗೃಹಗಳಲ್ಲಿ ಸಂಚರಿಸುತ ॥ ಕುಹಕಯುಕ್ತಿಯಿಂದ ಲೋಕ । ಮಹಿತರನ್ನು ನಿಂದಿಸುವನು ॥ ೫ ॥ ಬಹಳ ದ್ರವ್ಯದಿಂದ ಗರುಡ । ವಹನನಂಘ್ರಿಭಜಿಸಿ ಅನು ॥ ಗ್ರಹವ ಮಾಡು ಯೆಂದು ಬೇಡಿ । ಅಹಿಕ ಸುಖವ ಬಯಸುವವನು ॥ ೬ ॥ ಕರಣಜನ್ಯ ಪುಣ್ಯಪಾಪ । ವೆರಡು ಹರಿಯಧೀನವೆಂದು ॥ ಸ್ಮರಿಸುತಲತಿಭಕುತಿಯಿಂದ । ಹರುಷಬಡದಲಿಪ್ಪ ಮನುಜ ॥ ೭ ॥ ಜೀವನ ಕರ್ತೃತ್ವ ಮರೆದು । ದೇವನೊಬ್ಬ ಕರ್ತೃ ರಮಾ ॥ ದೇವಿ ಮೊದಲುಗೊಂಡು । ಹರಿಯ ಸೇವಕರೆಂದರಿಯದವನು ॥ ೮ ॥ ವಾತಜನಕನೆನಿಪ ಜಗ । ನ್ನಾಥವಿಟ್ಠಲನ ಪದಾಬ್ಜ ॥ ಪ್ರೋತವಾಶ್ರಯಿಸಿ ಭವ । ವೈತರಣಿಯ ದಾಟದವನು ॥ ೯ ॥ ಶ್ರೀಃ ॥

✓೩೭. ರಾಗ ಶಂಕರಾಭರಣ, ರೂಪಕತಾಳ.

ಮುಕ್ತನಲ್ಲವೆ । ಭವದಿ । ಮುಕ್ತನಲ್ಲವೆ ॥ ಪಲ್ಲ ॥ ಶಕ್ತನಾದ ಹರಿಯ ಪರಮ । ಭಕ್ತಿಯಿಂದ ಭಜಿಪ ನರನು ॥ ಅನುಪಲ್ಲ ॥ ಉದಯದುಷಃಕಾಲದಲ್ಲಿ ಯೆದ್ದು । ಮಧುವಿರೋಧಿಯಮಲಗುಣವ ॥ ಹೃದಯದಲ್ಲಿ ನೆನೆದು ಪರಮ । ಮುದದಿ ನಲಿದು ಪಾಡುವವನು ॥ ೧ ॥ ಕೇಶವಗೆ ರಮಾಬ್ಜಭವ ಸ । ದಾಶಿವ ಶಕ್ರಾದಿ ಸುರರು ॥ ದಾಸರು ಎವೆಯಿಡುವ ಶಕ್ತಿ । ಲೇಶವಿಲ್ಲೆಂಬ ನರನು ॥ ೨ ॥ ಒಂದಧಿಕ ದಶೇಂದ್ರಿಯಗಳಿ । ಗಿಂದಿರೇಶವಿಷಯವ ಸಂ ॥ ಬಂಧಗೈಸಿ ವೈಷಯಿಕಸುಖ । ತಂದು ಕೊಡುವೆನೆಂಬ ನರನು ॥ ೩ ॥ ಈಪರಿಯಲಿ ತಿಳಿದು ಪುಣ್ಯ । ಪಾಪಕರ್ಮ ದುಃಖಸುಖಜ ॥ ಯಾಪಜಯ ಮಾನಾಪಮಾನ । ಶ್ರೀಪ ಕೊಡುವನೆಂಬ ನರನು ॥ ॥ ೪ ॥ ವೇದಶಾಸ್ತ್ರಗಳಲಿ ಇಹ ವಿ । ರೋಧವಾಕ್ಯಗಳನು ಶ್ರೀಪ್ರ ॥ ಮೋದತೀರ್ಥರುಕ್ತಿಯಿಂದ । ಶೋಧಿಸಿ ತಿಳಕೊಂಬ ನರನು ॥ ೫ ॥ ಮಹಿತರು ಆಚರಿಪ ಧರ್ಮ । ವಿಹಿತವೇ ಅಸಜ್ಜನರು ಮಾಳ್ಪ ॥ ವಿಹಿತಕರ್ಮವಾದರು ಅದು । ಅಹಿತವೆಂದು ತಿಳಿವ ನರನು ॥ ೬ ॥ ಪರಮಸೂಕ್ಷ್ಮ ಜೀವರೊಂದ । ಡಿರಗೊಡದಲೆ ಸ್ವರ್ಗಭೂಮಿ ॥ ನರಕಫಲಗಳುಣಿಸಿ ಕರ್ಮ । ಹರಿಸುವ ಹರಿಯೆಂಬ ನರನು ॥ ೭ ॥ ಗುರುಹಿರಿಯರ ಮಹಿತು

ಗಳನು । ಸರಿಸಿ ನಡೆದು ಅವರೊಳಿದ್ದ ॥ ಪುರವು ಪುರುಷಗರ್ಪಿಸುತಲಿ । ಹರುಷಬಡುತಲಿಪ್ಪ ನರನು ॥ ೮ ॥ ಈಶರೀರದರಸು ಶ್ರೀನಿ । ವಾಸಾ ವಾತ್ಯ ಪ್ರಾಣ ಸಾರ್ವ ॥ ತೀಶರಿಹರು ಎಂದೀ ದೇಹ । ಪೋಷಿಸುತಲಿ ತೋಷಿಸುವನು ॥ ೯ ॥ ಪ್ರಿಯವಸ್ತುಗಳೊಳಗೆ ಅನ್ನ । ವುಯನೆ ಪ್ರೀಯ ನೆಂದು ಅನ್ಯ ॥ ಬಯಕೆಗಳನು ಜರಿದು ಹರಿಯ । ದಯವ ಬಯಸುತಿಪ್ಪ ನರನು ॥ ೧೦ ॥ ಶತ್ರುತಾಪಕನುಳಿದು ಅನ್ಯ । ಮಿತ್ರರಿಲ್ಲವೆಂದು ಅಹೋ ॥ ರಾತ್ರಿಯಲ್ಲಿ ಬಿಡದೆ ಜಗ । ದ್ಧಾತ್ರನ ಗುಣ ತುತಿಪ ನರನು ॥ ೧೧ ॥ ಬಿಂಬನೆನಿಸಿ ಸರ್ವರ ಹೃದ । ಯಾಂಬರದೊಳಗಿದ್ದು ಜನ ವಿ ॥ ಡಂಬ ನಾರ್ಥ ಕರ್ಮಗಳ ಆ । ರಂಭವಾಳ್ಪನೆಂಬ ನರನು ॥ ೧೨ ॥ ಅಕ್ಷರೇಡ್ಯ ಬ್ರಹ್ಮವಾಯು । ತ್ರ್ಯಕ್ಷಸುರಪ ಸುರರೊಳಗ ॥ ಧ್ಯಕ್ಷ ಸರ್ವ ಕರ್ಮ ಗಳಿಗೆ । ಸಾಕ್ಷಿಯೆಂದು ಸ್ಮರಿಸುವವನು ॥ ೧೩ ॥ ಅಂಬುಜಭವಾಂಡ ದೊಳು ವು । ಹಾಂಬರವಿಪ್ಪಂತೆ ಶ್ರೀನಿ ॥ ತಂಬಿನಿ ಸಹಸರ್ವರೊಳಗೆ । ತುಂಬಿಹನೆಂದರಿತ ನರನು ॥ ೧೪ ॥ ಅದ್ವಿತೀಯನಪೇಕ್ಷ ಭಕ್ತ । ಹೃದ್ವ ನಜ ನಿವಾಸಿಯೆನಿಸಿ ॥ ಕದ್ದೊಯ್ದುವರಘವನುಣಿಪ । ನದ್ವೈತರಿಗೆಂಬ ನರನು ॥ ೧೫ ॥ ಜಾಂಬವತೀರಮಣ ವಿಷಯ । ಹಂಬಲವನು ಬಿಡಿಸಿ ತನ್ನ । ಕಾಂಬುವ ಸುಖವಿತ್ತು ನಿಜ ಕು । ಟುಂಬದಿಡುವನೆಂಬ ನರನು ॥ ॥ ೧೬ ॥ ಅಣುಮಹತ್ಪದಾರ್ಥವಿಲ । ಕ್ಷಣ ವಿಶೋಕ ಜೀವರೊಡನೆ ॥ ಜನಿಸಿ ಪುಣ್ಯಾಪಾಪಫಲಗ । ಳುಣದೆ ಉಣಿಪನೆಂಬ ನರನು ॥ ೧೭ ॥ ವಿಧಿನಿಷೇಧವೆರಡು ಕರ್ಮ । ಸುದತಿಯರೊಡಗೂಡಿ ಸವಾ ॥ ಭ್ಯಧಿಕ ಶೂನ್ಯವಾಳ್ಪನೆಂದು । ಪದೇಪದೆಗೆ ಸ್ಮರಿಸುವವನು ॥ ೧೮ ॥ ಸ್ವಾತಿ ವರುಷವಾರಿಕಣವ । ಚಾತಕ ಹಾರೈಸುವಂತೆ ॥ ಶ್ವೇತವಾಹನಸಖನ ಕಥೆಯ । ಪ್ರೀತಿಯಿಂದ ಕೇಳ್ವ ನರನು ॥ ೧೯ ॥ ಲೋಕಬಂಧು ಲೋಕ ನಾಥ । ಲೋಕಮಿತ್ರ ಲೋಕರೂಪ ॥ ಲೋಕರಂತೆ ಲೋಕದೊಳು ವಿ । ಶೋಕ ವಾಳ್ಪನೆಂಬ ನರನು ॥ ೨೦ ॥ ಶಾತಕುಂಭವರ್ಣ ಜಗ । ನ್ನಾಥವಿಠಲನೆಂಬ ವುಹ ॥ ದ್ಭೂತಬಡಕ ರಾವು ಇವನ । ಭೀತಿ ಬಿಡದು ಯೆಂಬ ನರನು ॥ ೨೧ ॥ ಶ್ರೀಃ ॥

## ೩೮. ರಾಗ ಪೂರ್ವಿ, ಝಂಪೆತಾಳ.

ಸ್ಮರಿಸು ಸಂತತ ಹರಿಯನು । ಮನವೇ । ಸ್ಮರಿಸು ಸಂತತ ಹರಿಯನು ॥ ॥ ಪಲ್ಲ ॥ ಸ್ಮರಿಸು ಸಂತತ ಹರಿಯಾ ಕರುಣಾಳುಗಳ ಧೊರೆಯಾ । ಸರಸಿಯೊಳಗಂದು ಕರಿಯಾ । ನರನ ಸಂ । ಗರದೊಳಗೆ ಕಾಯ್ದುದರಿಯಾ । ಜಪಹೋಮ । ವ್ರತದಾನತಪಕೆ ದೊರೆಯಾ ॥ ಜಗದೀಶ । ಶರಣುಹೊಕ್ಕವರ ಮರೆಯಾ । ಖರೆಯಾ ॥ ಅನುಪಲ್ಲ ॥ ತಾನೆ ಇಹಪರಸೌಖ್ಯದಾನಿಗಳರಸನೆಂದು । ಸಾನುರಾಗದಿ ನಂಬಿದ । ಜನಕೆ ಸುರ । ಧೇನುವಂದದಲಿ ಮೋದಾ । ಸಲಿಸುವವ । ಹಾನಂದ ಪೂರ್ಣಬೋಧಾ ॥ ಪತಿ ಸಾವ । ಗಾನಲೋಲನ ಪ್ರಸಾದ । ಪಾದಾ ॥ ೧ ॥ ಎಲ್ಲೆಲ್ಲಿ ನೋಡೆ ಮತ್ತಲ್ಲಲ್ಲಿ ನೆಲಸಿಹನು । ಬಲ್ಲಿದನು ಭಾಗ್ಯವಂತಾ । ನಂಬಿದರಿ । ಗಲ್ಲದೆ ಒಲಿಯ ಭ್ರಾಂತಾ । ದುಷ್ಟಜನ । ರೊಲ್ಲ ನಿಶ್ಚಯ ಮಹಂತಾ ॥ ರೊಡೆಯ ಕೈ । ವಲ್ಯದಾಯಕನ ಇಂಥಾ । ಪಂಥಾ ॥ ೨ ॥ ನೋಡಿ ನೋಡಿಸುತಿಹನು ಮಾಡಿ ಮಾಡಿಸುತಿಹನು । ನೀಡಿ ನೀಡಿಸುವ ಪಿಡಿವಾ । ಪಿಡಿಸುವನು । ಬೇಡಿ ಬೇಡಿಸುವ ಬಡವ । ರೊಡೆಯ ಕೊಂ । ಡಾಡುವರ ಒಡನಾಡುವಾ ॥ ಈವುಹಿವೆ । ಗೀಡೆಂದು ಆವ ನುಡಿವಾ । ಕೆಡುವಾ ॥ ೩ ॥ ಅಣುವಿನೊಳಗಣುವಹನು ಘನಕೆ ಘನತರನಹನು । ಅಣುಮಹದ್ವಿಲಕ್ಷಣಾ । ಕಲ್ಯಾಣ । ಗುಣಜ್ಞಾನಘನಲಕ್ಷಣಾ । ಸಂಪೂರ್ಣ ಮನವುಟ್ಟೆ ಕರೆಯಾಕ್ಷಣಾ ॥ ಬಂದೊದಗಿ । ಕುಣಿವ ಲಕ್ಷ್ಮೀವಕ್ಷನಾ । ನಪೇಕ್ಷನಾ ॥ ೪ ॥ ಚಲುವರೊಳಗತಿಚಲುವ ಸುಲಭರೊಳಗತಿಸುಲಭ । ವೊಲಿವ ಮನಬಂದ ತೆರದೀ । ಗುಣಕರ್ಮ । ಕುಲಶೀಲನೆಣಿಸದ್ವಿರದೀ । ಭಕುತಿಯುಲಿ । ಫಲವ ಕೊಡೆ ತಾ ತವಕದೀ । ಶಬರಿಯೆಂ । ಜಲನುಂಡ ಕರುಣಶರಧೀ । ಮರದೀ ॥ ೫ ॥ ಪ್ರಾದೇಶಮಾತ್ರಸ್ಥಿತ ಶ್ರೀದೇವಿಯುರಸ ಕನ । ಕೋದರಾದ್ಯಮರವ್ರಾತಾ । ಸಹಿತ ಮಹದಾದಿಪೃಥ್ವ್ಯಂತಭೂತಾ ॥ ದೊಳು ನಿಲಿಸಿ । ಕಾದುಕೊಂಡಿಹ ವಿಧಾತಾ । ಲಂಡತ್ರಿದ । ಶಾಧಿಪನ ಸುತನ ಸುತಾ । ಸ್ವರತಾ ॥ ೬ ॥ ಸ್ವಗತಭೇದವಿಶೂನ್ಯ ನಿಗಮಸಂಚಾರ ಶ್ರೀ । ಜಗನ್ನಾಥವಿಠಲರೇಯಾ । ತನ್ನ ಪಾದಗಳ ಧ್ಯಾನ

ಪರ ಸೋಯಾ। ಗೊಡದಂತೆ। ಹಗಲಿರುಳು ಕಾವ ಮಾಯಾ। ರಮಣ
ನ। ಮೃಗಲಿ ಸೈರಿಸನು ಪ್ರೀಯಾ। ಧೇಯಾ ॥ ೭ ॥ ಶ್ರೀಃ ॥

## ೩೯. ರಾಗ ಧನಾಶ್ರಿ, ಆದಿತಾಳ.

ಧನ್ಯನಾದೆನು ವಿಠಲನ ಕಂಡು। ಓಡಿತು ಅಘದಿಂಡು ॥ ಪಲ್ಲ ॥ ಧನ್ಯ
ನಾದೆನೂ। ಜಾನ್ಹವಿಪಿತ ಲಾ ॥ ವಣ್ಯಮೂರುತಿಯ। ಕಣ್ಣಿಲಿ ಕಂಡು ॥
॥ ಅನುಪಲ್ಲ ॥ ದೇವವರೇಣ್ಯ ಸ। ದಾವಿನೋದಿ ವೃಂ॥ ದಾವನಸಂಚರ।
ಗೋವನ ಕಂಡು ॥ ೧ ॥ ಮಂಗಳಾಂಗ ಕಾ। ಳಿಂಗಮಥನ ಮಾ॥ ತಂಗ
ವರವರದ। ರಂಗನ ಕಂಡು ॥ ೨ ॥ ಹಾಟಕಾಂಬರ ಕಿ। ರೀಟಿಸಾರಥೀ ॥
ತಾಟಕಾರಿವೈ। ರಾಟನ ಕಂಡು ॥ ೩ ॥ ಚಿಂತಿತ ಫಲದ ಕೃ। ತಾಂತನಾ
ತ್ಮಜಾ ॥ ದ್ಯಂತರಹಿತನಿ। ಶ್ಚಿಂತನ ಕಂಡು ॥ ೪ ॥ ಮಾತುಳಾಂತಕೆವಿ।
ಧಾತಪಿತಾ ಜಗ ॥ ನ್ನಾಥವಿಠಲ ವಿ। ಖ್ಯಾತನ ಕಂಡು ॥ ೫ ॥ ಶ್ರೀಃ ॥

## ೪೦. ರಾಗ ಕಾಂಬೋಧಿ, ಝಂಪೆತಾಳ.

ತೆರಳಿದರು ವಿಜಯರಾಯರು ವಿಠಲನ ॥ ಪುರದೊಳಗೆ ಪರಮಭಕ್ತರ
ಕಾಣಬೇಕೆನುತ ॥ ಪಲ್ಲ ॥ ಯುವ ಸಂವತ್ಸರದ ಕಾರ್ತಿಕಶುದ್ಧ ದಶಮಿ
ವಿಭ।ಕರವು ಗುರುವಾರ ಪ್ರಥಮ ಯಾಮದೀ॥ ಪವನಾಂತರಾತ್ಮಕ ಶ್ರೀ
ಹರಿಯ ದರ್ಶನೋ। ತ್ಸವ ಸಂಪಾದಿಸುವ ಬಹು ಲವಲವಿಕೆಯಿಂದಲೀ॥
॥ ೧ ॥ ಧರಣಿಯೊಳು ಭಾಸ್ಕರಕ್ಷೇತ್ರವೆನಿಸುವ ಚಿಪ್ಪ। ಗಿರಿಯೆಂಬ
ಗ್ರಾಮದಿ ವಿಬುಧರ ಮುಖದಿ ॥ ವರಭಾಗವತ ಬ್ರಹ್ಮಸೂತ್ರ ಭಾರತ
ಗೀತ। ಮರುತಶಾಸ್ತ್ರಾರ್ಥ ಗ್ರಂಥಗಳನಾಲಿಸುತಲೀ ॥ ೨ ॥ ಸುಖತೀರ್ಥ
ಮುನಿಯ ಮನಕನುಕೂಲಸಚ್ಛಾಸ್ತ್ರ। ನಿಕರಗಳ ಕವನರೂಪದಲಿ
ರಚಿಸೀ॥ ಭಕತರಿಗೆ ಸನ್ಮಾರ್ಗ ತೋರಿ ಸಂತೋಷದಲಿ। ವಿಖನಸಾರ್ಚಿತ
ಜಗನ್ನಾಥವಿಠಲನ ಪದಕೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ತೋಡಿ, ಆದಿತಾಳ.

ಇಂದಿರೇ ಇಂದುವದನೇ । ಸರಸಿಜಸದನೇ । ನಿಂದಿತಜನ ಸೂದನೇ ॥ ॥ ಪಲ್ಲ ॥ ವಂದಿಸುವೆನೆ ಅರವಿಂದಗಂಧಿನಿ ಮನ। ಮಂದಿರದಲಿ ಗೋವಿಂದನ ತೋರಿಸೇ ॥ ಅನುಪಲ್ಲ ॥ ಮೂಲೋಕಮಾತೆ ವಿಖ್ಯಾತೆ । ಕೈವಲ್ಯದಾತೆ। ಪಾಲಗಡಲಸಂಭೂತೆ। ಕಾಲದೇಶದಿ ವ್ಯಾಪಿತೆ ಭಜಕರ ಪ್ರೀತೇ। ಶೀಲೇ ಸಂಪೂರ್ಣಗುಣವ್ರಾತೆ ॥ ಫಾಲನಯನತ್ರಿದಶಾಲಯಪ್ರಮುಖರ। ಪಾಲಿಸುತಿಹೆ ಮುದ ಜಾಲಜನಕೆ ರಮೇ । ಶ್ರೀಲತಾಂಗಿ ನಿನ್ನಾಳುಗಳೊಳು ಹರಿ। ಲೀಲೆಯ ಮನದಲಿ ಆಲೋಚನೆ ಕೊಡೆ ॥ ೧ ॥ ಲೋಕನಾಯಕಿ ಲಕುಮಿ । ಶ್ರೀಸಾರ್ವಭೌಮೆ । ಶೋಕರಹಿತಸುನಾಮೆ । ನಾಕಜವನಧಿ।ಸೋಮೆ ದೇವಲಲಾಮೆ। ಸಾಕಾರವಂತೆ ಗುಣಸ್ತೋಮೆ ॥ ನೀ ಕರುಣಿಸಿ ಅವಲೋಕಿಸಿ ಯೆನ್ನಯ । ಕಾಕುಮತಿಯ ಕಳೆದೇಕಾಂತದಿ ನಿತ್ಯ । ಏಕಮನದಿ ಹರಿ ಶ್ರೀಕರಪದಧ್ಯಾನ । ನೀ ಕರುಣಿಸು ನಿರಾಕರಿಸದಲೆ ॥ ೨ ॥ ಜಾತರಹಿತೆ ಜಯವಂತೆ। ದೈತ್ಯಕೃತಾಂತೆ। ಸೀತಾಂಶುಕೋಟಿ ಮಿಗೆಕಾಂತೆ। ಪಾತಕದೂರೆ ನಿಜಪಂಥೆ। ನಿತ್ಯಾ ನಿಶ್ಚಿಂತೆ। ನೀತಾದೂರಾದಿಮಧ್ಯಾಂತೇ ॥ ಭೂತನಾಥ ಪುರುಹೂತಮುಖಾಮರ। ವ್ರಾತವಿನುತೆ ಅತಿಪ್ರೀತಿಯಿಂದಲಿ ನಮ್ಮ। ವಾತಜನಕ ಜಗನ್ನಾಥವಿಠಲನ। ಮಾತುಮಾತಿಗೆ ನೆನೆವಾತುರವನು ಕೊಡೇ ॥ ೩ ॥ ಶ್ರೀಃ ॥

## ೪೨. ರಾಗ ಮಧ್ಯಮಾವತಿ, ಅಟತಾಳ.

ಯೆಂದು ಕಾಂಬೆನೊ ಪಾಂಡುರಂಗ ಮೂರುತಿಯಾ । ಇಂದು ಭಾಗನಿವಾಸ ನರನ ಸಾರಥಿಯಾ ॥ ಪಲ್ಲ ॥ ಅರುಣಾಬ್ಜೋಪಮ ಚಾರುಚರಣಾಂಗುಲಿನಖರಾ । ತರಣೇಂದುಗಳ ತಿರಸ್ಕರಿಸುವ ಪ್ರಖರಾ ॥ ಕಿರುಗೆಜ್ಜೆ ಕಡಗ ನೂಪುರಪೆಂಡೆ ಶಫರಾ । ತರಜಾನುಜಂಘೆ ಭಾಸ್ಕರರತ್ನ ಮುಕರಾ ॥ ॥ ೧ ॥ ರಂಭಾಪೋಲುವ ಊರು ಪೊಂಬಣ್ಣಾಂಬರವಾ । ಕುಂಭಿ ಮಸ್ತಕವೋಲ್ನಿತಂಬಾದಿ ಪೊಳೆವಾ ॥ ಕಂಬುಮೋ ಖಳಕಂಜ ಗಂಭೀರನಾಭೀ । ಅಂಬುಧಿಶಾಯಿವಿಧಿಶಂಭುವಂದಿತನಾ ॥ ೨ ॥ ಲವಕುಕ್ಷಿತ್ರಿವಳಿಭಾಗ್ಯಪಿ

ವಕ್ಷ ಉದ್ಯ । ದ್ರವಿಪೋಲುವ ಕೌಸ್ತುಭನವವೈಜಯಂತೀ ॥ ಸುವಿಶಾಲ ವಕ್ಷದೊಳ್ವಿವಿಧಹಾರಗಳು । ನವನೀತಚೋರ ಶ್ರೀಪವಮಾನಪಿತನಾ ॥ ॥ ೩ ॥ ಪದಕಸರಿಗಿಯು ಜಾಂಬುನದ ಕಂಬುಕಂಠಾ । ರದನೀಕರ ತೆರ ಬಾಹು ಚದುರಭುಜಕೀರ್ತಿ ॥ ಬದರಸಂಕಾಶಾ ಅಂಗದ ರತ್ನಕಟಕಾ । ಪದುಮಾರುಣಕರಯುಗ್ಮ ಕಟಿಯಲ್ಲಿಟ್ಟಿಹನಾ ॥ ೪ ॥ ವಿಧುಬಿಂಬೋಪಮ ಚಲ್ವ ವದನ ಕೆಂದುಟಿಯಾ । ಭಿದುರಾಭಾದಶನಾಲಿಂಗದನೊಳ್ ಕಿರುನಗೆಯಾ ॥ ಕದಪು ಕನ್ನಡಿ ನಾಸತುದಿಚಂಪಕತೆನೆಯಾ । ಉದಕೇಜಾಯುತನೇತ್ರ ಯದುವಂಶೋದ್ಭವನಾ ॥ ೫ ॥ ಕಲಿತಕುಂಡಲಕರ್ಣ ಸುಲಲಿತಭ್ರೂಯುಗಳಾ । ಲಲಿತಾಬಾಲಶಶಾಂಕಾತಿಲಕಾಂಕಿತ ಫಾಲಾ ॥ ಅಳಿಜಾಲವೆನಿಪ ಕುಂತಳರತ್ನಚಕಿತಾ । ಕಲಧೌತಮುಕುಟ ದಿಗ್ವಲಯ ಬೆಳಗುವನಾ ॥ ೬ ॥ ಶಠಕೂರ್ಮರೂಪಿಯು ಕಿಟಿ ಮಾನವಹರಿಯಾ । ವಟುಭಾರ್ಗವ ಕಾಕುಸ್ಥ ಶಕಟಕಂಸದ್ವೇಷಿಯಾ ॥ ನಿಟಿಲಾಂಬಕ ಸಹಯ ಖಳಕಟಕಾರಿ ಭೀಮಾ । ತಟಶಾಯಿ ಜಗನ್ನಾಥವಿಠಲಾನ ಕೃತಿಯಾ ॥ ೭ ॥ ಶ್ರೀಃ ॥

## ೪೩. ರಾಗ ಆನಂದಭೈರವಿ, ಆದಿತಾಳ.

ರಾಯ ಬಾರೋ । ತಂದೆ । ತಾಯಿ ಬಾರೋ । ನಮ್ಮ । ಕಾಯಿ ಬಾರೋ । ಮಾಯಿಗಳ ಮರ್ದಿಸಿದ ರಾಘವೇಂದ್ರ । ರಾಯ ಬಾರೋ ॥ ಪಲ್ಲ ॥ ವಂದಿಪ ಜನರಿಗೆ ಮಂದಾರತರುವಂತೆ । ಕುಂದಾದಭೀಷ್ಟವ ಸಲಿಸುತಿಪ್ಪ । ರಾಯ ಬಾರೋ ॥ ಕುಂದಾದಭೀಷ್ಟವ ಸಲಿಸುತಿಪ್ಪ ಸರ್ವಜ್ಞ । ಮಂದನ ಮತಿಗೆ ರಾಘವೇಂದ್ರ । ರಾಯ ಬಾರೋ ॥ ೧ ॥ ಆರ್ಮೂರು ಏಳು ನಾಲ್ಕು ಎಂಟು ಗ್ರಂಥ ಸಾರಾರ್ಥ । ತೋರಿದಿ ಸರ್ವರಿಗೆ ನ್ಯಾಯದಿಂದ । ರಾಯ ಬಾರೋ ॥ ತೋರಿದಿ ಸರ್ವರಿಗೆ ನ್ಯಾಯದಿಂದ ಸರ್ವಜ್ಞ । ಸೂರಿಗಳರಸನೆ ರಾಘವೇಂದ್ರ । ರಾಯ ಬಾರೋ ॥ ೨ ॥ ರಾಮಪಾದಾಬ್ಜ ಸತತಭೃಂಗ ಕೃಪಾಪಾಂಗ । ಭ್ರಾಮಕಜನರ ಮಾನಭಂಗಾ । ರಾಯ ಬಾರೋ ॥ ಭ್ರಾಮಕಜನರ ಮಾನಭಂಗ ಮಾಡಿದ । ಧೀಮಂತರೊಡೆಯನೆ ರಾಘವೇಂದ್ರ । ರಾಯ ಬಾರೋ ॥ ೩ ॥ ಭಾಸುರಚರಿತ್ರನೆ ಭೂಸುರವಂದ್ಯನೆ ।

ಶ್ರೀಸುಧೀಂದ್ರಾರ್ಯರ ವರಪುತ್ರ। ರಾಯ ಬಾರೋ॥ ಶ್ರೀಸುಧೀಂದ್ರಾರ್ಯರ ವರಪುತ್ರನೆನಿಸಿದೇ। ದೇಶಿಕರೊಡೆಯ ರಾಘವೇಂದ್ರ। ರಾಯ ಬಾರೋ॥ ॥೪॥ ಭೂತಳನಾಥನ ಭೀತಿಯ ಬಿಡಿಸಿದಿ। ಪ್ರೇತತ್ವಕಳದಿ ಮಹಿಷಿಯ। ರಾಯ ಬಾರೋ॥ ಪ್ರೇತತ್ವಕಳದಿ ಮಹಿಷೀಯ ಮಹಾಮಹಿಮ ಜಗ। ನ್ನಾಥವಿಠಲನ ಪ್ರೀತಿಪಾತ್ರ। ರಾಯ ಬಾರೋ॥೫॥ ಶ್ರೀಃ॥

### ✓ ೪೪. ರಾಗ ಕಾಂಬೋಧಿ. ಝಂಪೆತಾಳ.

ಇದನೆ ಪಾಲಿಸು ಜನ್ಮಜನ್ಮಗಳಲಿ। ಮಧುಸೂದನನೆ ನಿನ್ನ ಸ್ಮರಣೆದಾಸರ ಸಂಗಾ॥ ಪಲ್ಲ॥ ಪುಣ್ಯಪಾಪ ಜಯಾಪಜಯ ಕೀರ್ತಿ ಅಪಕೀರ್ತಿ। ಮನ್ಯು ಮೋಹಾಸಕ್ತಿಕಾಮ ಲೋಭಾ॥ ನಿನ್ನಧೀನವು ಯೆನ್ನದಲ್ಲವೆಂದಿಗು ಪ್ರಕೃತಿ। ಜನ್ಯಗುಣಕಾರ್ಯವೆಂಬುವಜ್ಞಾನವೇ ಸತತಾ॥೧॥ ಗುಣಕರ್ಮಕಾಲಗಳ ಮನೆಮಾಡಿ ಜೀವರಿಗೆ। ಉಣಿಸುತಿಹೆ ಸುಖದುಃಖ ಘನಮಹಿಮನೆ॥ ಗುಣಗಳಭಿಮಾನಿ ಶ್ರೀವನಿತಾರಮಣ ಪ್ರಿಯೋ। ಜನವಿಲ್ಲದಲೆ ಮಾಡಿ ಜನರ ಮೋಹಿಪಿ ಯೆಂಬೊ॥೨॥ ಈಶ ನೀನಾದ ಕಾರಣದಿಂದ ಸುಖದುಃಖ। ಲೇಶವಿಲ್ಲವು ಸರ್ವಕಾಲಗಳಲಿ॥ ಕೇಶವ ಜಗನ್ನಾಥವಿಠಲನೆ ಭಕ್ತರ ಪ್ರ। ಯಾಸವಿಲ್ಲದೆ ಕಾಯ್ವಿಯೆಂಬ ಸ್ಮರಣೆಯ ನಿರುತಾ॥೩॥ ಶ್ರೀಃ॥

### ೪೫. ರಾಗ ಶಂಕರಾಭರಣ, ಅಟತಾಳ.

ಶ್ರೀಶಬ್ರಹ್ಮಸದಾಶಿವಾದಿಸುರಾಸುರಾರ್ಚಿತ ದಾಶರಥಿ ತವ॥ ದಾಸರೊಳಗಿಟ್ಟು ನೀ ಸಲಹು ವಿಷಯಾಶೆಗಳ ಬಿಡಿಸಿ॥ ಪಲ್ಲ॥ ಲೋಕನೀಯ ವಿಶೋಕಭಕ್ತರ ಶೋಕಮೋಹವ ನೀ ಕಳದು ಸುಖ। ವೇ ಕರುಣಿಸು ಕೃಪಾಕಟಾಕ್ಷದಿ ಆಕುತಿ ತನಯಾ॥ ವಾಕು ಮನ್ನಿಸನೇಕಮಹಿಮ ವಿವೇಕಬುದ್ಧಿಯ ನೀ ಕೊಡೆನಗೆ ಪಿ। ನಾಕಿನುತ ಪರಲೋಕದಾಯಕ ಲೌಕಿಕವ ಬಿಡಿಸೋ॥೧॥ ವೈರಿವರ್ಗಗಳಾರು ಇಂದ್ರಿಯದ್ವಾರದೊಳು ಪೊಕ್ಕು ಚಾರುಧರ್ಮದ। ದಾರಿ ಮನಸಿಗೆ ತೋರಗೊಡದಲೆ ನಾರಿ ಧರಣಿಧನಾ॥ ಹಾರಯಿಸುತಿದ್ದು ಘೋರಿಸುತಿವೆ ಮುರಾರಿ ತವ ಚರಣಾ

ಖಂದವ । ತೋರಿ ಮನದಿ ಸಂಸಾರಶರಧಿಯ ತಾರಿಸನುದಿನದೀ ॥ ೬ ॥
ವೀತಭಯಭವವೈತರಣಿನವಪೋತ ಕಾಲನ ಭೀತಿಬಿಡಿಸು ಪುರು ।
ಹೂತನ ಪ್ರಿಯ ಮಾತುಳಾಂತಕ ಮಾತುಗಳನೆ ಮನ್ನಿಸಿ ॥ ಶ್ವೇತವಾ
ಹನಸೂತ ಸುಖಮಯವಾತಪಿತ ಜಗನ್ನಾಥವಿಟ್ಠಲ । ಪಾತಕಾರಣ್ಯ
ವೀತಿಹೋತ್ರನೆ ನಾ ತುತಿಸೆನೆ ನಿನ್ನಾ ॥ ೩ ॥ ಶ್ರೀಶ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೪೬. ರಾಗ ಸಾರಂಗ. ಅಟ್ಟತಾಳ.

ನಾರಿಜಾನನೆ ಇವನ್ಯಾರು ಪೇಳಮ್ಮಾ ॥ ಮಾರಜನಕ ಮುರಾರಿ
ಕಾಣಮ್ಮಾ ॥ ಪಲ್ಲ ॥ ಅರುಣಚರಣ ಕಳದಿರವು ಅಂಕುಶಧ್ವಜ । ಅರ
ವಿಂದರೇಖಾಂಕ ಪುರುಷನಾರಮ್ಮಾ ॥ ಉರಗಶಯನಕರಸರೋಜಮಧ್ಯ
ದೊಳಿಟ್ಟು । ಸುರರಿಂದರ್ಚನೆಗೊಂಬ ಹರಿಯು ಕಾಣಮ್ಮಾ ॥ ೧ ॥
ಪೊಳೆವ ಉದಯಶಶಿಬೆಳಗು ಸೋಲಿಪ ನಖಾ । ವಳಿಯಿಂದ ಒಪ್ಪುವ
ಚೆಲುವನಾರಮ್ಮಾ ॥ ಕುಲಿಶಪಾಣಿಗೆ ಪೊಲಿದಿಳೆಯೊಳು ಬಂದು ಖಂ ।
ಜಲವ ಪಡದಾನಂದಜಲಧಿ ಕಾಣಮ್ಮಾ ॥ ೨ ॥ ಕಡಗ ಅಂದುಗೆ ಗೆಜ್ಜೆ
ಕಡಪ ಪೊನ್ನೂಪುರ । ತೊಡದಿಂದ ಬರುತಿಹ ಪ್ರೌಢನಾರಮ್ಮಾ ॥ ದೃಢ
ಭಕ್ತರೆಡೆಯಲ್ಲಿ ಬಿಡದೆ ನಲಿಯುತಿಪ್ಪ । ಮೃಡಸುರಸಾದ್ಯರ ಪತಿಯು ಕಾ
ಣಮ್ಮಾ । ೩ ॥ ಕರಿಪಲ್ಲಿನಂತೆ ಸುಂದರಜಂಘೆ ಜಾನುಗ । ಳೆರಡು ತರಣಿ
ಯಂತೆ ಇರುವನಾರಮ್ಮಾ ॥ ಪರಮೇಷ್ಠಿಪ್ರಳಯದಿ ಸಿರಿಯಿಂದ ನುತಿ
ಗೊಂಬ । ಪರಮಪುರುಷ ನರಹರಿಯು ಕಾಣಮ್ಮಾ ॥ ೪ ॥ ಇಭವರಕರ
ದಂತೆ ಉಭಯ ಊರು ಕಟಿ । ಪ್ರಭೆ ವಸನವನುಟ್ಟ ಸುಭಗನಾರಮ್ಮಾ ॥
ರಭಸದಿಂದಲಿ ಕಂಭ ಬಗಿದು ಪ್ರಹ್ಲಾದಗೆ । ಅಭಯವಿತ್ತ ಸುರಪ್ರಭುವು
ಕಾಣಮ್ಮಾ ॥ ೫ ॥ ವಲಿಮುಕಬಿಲದಂತೆ ಸುಳಿನಾಭಿಜಠರತ್ರಿ । ವಳಿಗಳಿಂ
ದಲಿ ಬಲು ಪೊಳೆವನಾರಮ್ಮಾ ॥ ನಳಿನೋದ್ಭವನಪುತ್ರಾಖಿಳಲೋಕತಾ
ಳಿದಾ । ಹಲಾಹಲಕಂಠನ ಗೆಳೆಯ ಕಾಣಮ್ಮಾ ॥ ೬ ॥ ಸಿರಿವತ್ಸಕೌಸ್ತುಭ
ವೈಜಯಂತೀಸರ । ಸಿರಿಯಿಂದಲೊಪ್ಪೋ ನಿರೆಯನಾರಮ್ಮಾ ॥ ವರ

ಭೃಗುಮುನಿಪನ ಸ್ಪರುಶವನು ತಾಳ್ದ । ಕರುಣಾಸಾಗರ ಸಿರಿಧರನು ಕಾಣವ್ವಾ ॥ ೭ ॥ ಚತುರಹಸ್ತದಿ ಗದೆಶತಪತ್ರ ಅರಿಶಂಖ । ಸತತ ಪಿಡಿ ದಿಹ ಚತುರನಾರವ್ವಾ ॥ ದಿತಿಜರ ಸದೆದು ದೇವತೆಗಳ ಸಲಹುದ । ಚತು ರಾತ್ಮಕೃತಿದೇವಿಪತಿಯು ಕಾಣವ್ವಾ ॥ ೮ ॥ ಧರತೀರ ಕಂಧರ ಸುರಚಿರ ಬಿಂಬ ಅ । ಧರದಿಂದೊಪ್ಪುತಲಿಹ ಸಿರಿಯನಾರವ್ವಾ ॥ ಸಿರಿಯ ಒಡನೆ ಕ್ಷೀರಶರಧಿಯೊಳೊರಗಿಪ್ಪ । ಶರಣರ ವಜ್ರಪಂಜರನು ಕಾಣವ್ವಾ ॥ ೯ ॥ ಸುರಕಪೋಲನಾಸ ಸರಸಿಜನಯನ ಪು । ಷ್ಪೆರಡು ಕುಂಡಲಯುಗಧ ರನು ಆರವ್ವಾ ॥ ಶರಧಿಮಥನದಲ್ಲಿ ತರುಣಿಯಾಗಿ ಅಸು । ರರ ಮೋಹಿ ಸಿದ ಅಜರನು ಕಾಣವ್ವಾ ॥ ೧೦ ॥ ಬಾಲಶಶಿಯಂತೆ ಫಾಲಕಸ್ತೂರಿ ನಾಮ । ಮೌಳಿಸುಳಿಕೇಶಬಾಲನಾರವ್ವಾ ॥ ಮೂಲೇಶನಾದ ಜಗನ್ನಾ ಥವಿಠಲ । ಮೂಲೋಕಾಧಿಪ ಶ್ರೀಗೋಪಾಲ ಕಾಣವ್ವಾ ॥ ೧೧ ॥

## ೪೭. ರಾಗ ಕಾಂಬೋಧಿ, ಝಂಪೆತಾಳ.

ಜಗದಾಖ್ಯವೃಕ್ಷ ಚಿಂತಿಪುದು ಬುಧರು । ಭಗವಂತನೆಂಬ ಅಗಸದಲಿ ಪಸರಿಸಿದ ॥ ಪಲ್ಲ ॥ ಚತುರಾಸ್ಯ ವಾಣಿ ಈರ್ವರು ಬೀಜ ಚಿತ್ಪ್ರಕೃತಿ । ಪೃಥಿವಿಕರ್ಮವು ಬೇರು ತ್ರಿಗುಣತ್ವಚವು । ಕ್ಷಿತಿಜಲಾನಲವಾಯು ಗಗ ನಶಾಖೆಗಳೀಕ । ಶತಿಕರಣ ಉಪಕೊಂಬೆ ಯೆನಿಸಿಕೊಂಬುದು ಇದಕೆ ॥ ॥ ೧ ॥ ಅಹಂಕಾರಬಲದಿಂದ ಅಭಿವೃದ್ಧಿಯೈದುವದು । ಅಹಿಕಸುಖ ಕುಸುಮ ತನ್ಮಾತ್ರ ರಸದಿ ॥ ಸಹಿತವಾದ ಪ್ರವೃತ್ತಿ ನಿವೃತ್ತಿ ಕರ್ಮದ ಫಲವ । ಅಹರಹರ್ಭುಂಜಿಪುದು ತನ್ಮಾತ್ರಜೀವಸಿಗಾ ॥ ೨ ॥ ನಾನು ನನ್ನದು ಯೆಂಬೋ ನೀಡು ದ್ವಯವು ಇದಕೆ । ಮಾನಾಪಮಾನಾದಿಗಳೆ ಪತ್ರವು ॥ ಹೀನವಿದ್ಯಾದಿಪಂಚಕವೆ ಸರ್ಪಗಳಲ್ಲಿ । ಶ್ರೀನಿಧಿ ಜಗನ್ನಾಥ ವಿಠಲ ಸಂರಕ್ಷಕನು ॥ ೩ ॥ ಶ್ರೀಃ ॥

## ೪೮. ರಾಗ ಧನಾಶ್ರಿ, ಆದಿತಾಳ.

ಬೆಡಗು ತೋರುತಲಿದಕೋ । ಮಾಧವರಾಯ ॥ ಪಲ್ಲ ॥ ಉಡುರಾಜ ಮೌಳಿವಿನುತನೆ ಯೆನಗೊಂದು ॥ ಅನುಪಲ್ಲ ॥ ಕುಂಜರವರದ ಗ

ನಂಜಯನ ದುರಿತ ॥ ಭಂಜಿಸಿ ಕರದಿ ಗುಲು । ಗುಂಜಿಯು ಪಿಡಿದದ್ದು ॥ ॥ ೧ ॥ ಮೋಕ್ಷಪದವಿಯ ಉ । ಪೇಕ್ಷೆಮಾಡಿ ಬಂದು ॥ ಈಕ್ಷಿತಿಯೊಳಗೆ ಪಂ । ಪಾಕ್ಷೇತ್ರದಿ ಇಪ್ಪ ॥ ೨ ॥ ಸುಗುಣಸಾಕಾರನೆ । ಜಗನ್ನಾಥ ವಿಠಲನೇ ॥ ಜಗತಿಯು ಬಗಿದಿಲ್ಲ । ಮಿಗೆ ವಾಸವಾದದ್ದು ॥ ೩ ॥ ಶ್ರೀಃ ॥

## ೪೯. ರಾಗ ಕಾಂಬೋಧಿ, ಝಂಪೆತಾಳ.

ಬೇಡಲೇತಕೋ ಪರರ ದೇಹಿಯೆಂದು । ನೀಡುವ ಧೊರೆ ಎನಗೆ ನೀನಿರಲು ಸರ್ವದಾ ॥ ಪಲ್ಲ ॥ ಗ್ರಾಸವನು ಬೇಡ್ದ ದೂರ್ವಾಸಮುನಿಗನ್ನ ಆ । ಯಾಸವಿಲ್ಲದೇ ತತ್ಕಾಲದಿ ಕಲ್ಪಿಸೀ ॥ ಆಸಂಯಮಿಗೆ ಉಣಿಸಿ ದಣಿಸಿದ ಮಹಾದಾತಾ । ದಾಶರಥೆ ನಿನ್ನ ಬಿಟ್ಟನ್ಯದೇವತೆಗಳನಾ ॥ ೧ ॥ ಖೂಳ ದುಶ್ಯಾಸ ದ್ರೌಪದಿಯ ಸಭೆಯೊಳಗೆಳೆದು । ಕೂಲಸೆಳೆಯಲು ಭಾಳ ನೊಂದು ಮನದೀ ॥ ಶ್ರೀಲೋಲ ಕೃಷ್ಣ ಕರುಣಿಸು ಕರುಣಿಸೆನಲು ಪಾಂ । ಚಾಲಿ ಮೊರೆ ಕೇಳಿ ದಿವ್ಯಾಂಬರನಿಚಯವಿತ್ತೀ ॥ ೨ ॥ ಮಡದಿ ಕಳುಹಲು ಬಂದ ಪೀಡಿಸುವ ಬ್ರಾಹ್ಮಣನ । ಬಡತನವ ಕಳದೆ ಒಪ್ಪಿಡಿ ಅವಲಿಗೆ ॥ ಪೊಡವಿ ಆಳಿಸಿದಿ ಕ್ರಿಮಿಗೊಲಿದು ಕಾರುಣ್ಯದಲಿ । ಜಡಜಸಂಭವ ಮೃಡಬಿಡೌಜರೀಪ್ಸಿತವೀವೇ ॥ ೩ ॥ ತಾಪಸೋತ್ತಮಮೃಕಂಡಾತ್ಮಜಗೆ ಕಲ್ಪಾಯು । ನೀ ಪೂರ್ತಿಮಾಡಿದ್ಯಲ್ಪಾಯು ಕಳೆದು ॥ ಆ ಪರೇಕೇಶ್ವರನ ಪಟ್ಟಣವ ಸೇರಿದ ಸಾಂ । ದೀಪತನಯನ ತಂದ ಸರ್ವಾಂತರ್ಯಾಮಿ ॥ ೪ ॥ ಕಲ್ಪಕಲ್ಪಗಳಲ್ಲಿ ವಿಶ್ವಜೀವರಿಗನ್ನ । ಕಲ್ಪಕನು ನೀನಿರಲು ಭ್ರಾಂತಿಯಿಂದ ॥ ಅಲ್ಪಮಾನವರಿಗಾಲ್ಪರಿದರೇನಹುದಹಿ । ತಲ್ಪ ಜಗನ್ನಾಥವಿಟ್ಠಲ ಕಲ್ಪತರುವಿರಲೂ ॥ ೫ ॥ ಶ್ರೀಃ ॥

## ೫೦. ರಾಗ ಪೂರ್ವಿಕಲ್ಯಾಣಿ, ಆದಿತಾಳ.

ತ್ರಟಿತಕ್ಕೋಟಿನಿಭಕಾಯ ಜಗನ್ನಾಥ । ವಿಠಲಯ್ಯಾ । ವಿಠಲಯ್ಯಾ ॥ ಪಲ್ಲ ॥ ಭಜಿಸುವೆ ನಿನ್ನನು ಅಜಭವಸುರನುತ ॥ ಭಜಕಾಮರತರು ಕುಜನಕುಠಾರೀ ॥ ೧ ॥ ನೀ ಕರುಣಿಸದೆ ನಿರಾಕರಿಸಲು ಎನ್ನ ॥ ಸಾಕುವ

ರಾರು ದಯಾಪರವಾರುತಿ ॥ ೨ ॥ ಶರಣಾಗತರನು ಪೊರಿವೆನೆಂಬ ತವ ॥ ಬಿರಿದು ಕಾಯೋ ಕರಿವರದ ಜಗನ್ನಾಥ ॥ ವಿಠಲಯ್ಯಾ । ವಿಠ ಲಯ್ಯಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ✓೫೧. ರಾಗ ಕಾಂಬೋಧಿ, ಝಂಪೆತಾಳ.

ನಿನ್ನ ದಾಸರ ದಾಸನೆಂತಾಹೆನೋ । ಅನ್ನಂತ ಅಪರಾಧ ಅನುಗಾಲ ಮಾಡುತಿಹೆ॥ ಪಲ್ಲ॥ ಸ್ನಾನಸಂಧ್ಯಾನಜಪಮೌನವೇ ಮೊದಲಾದ। ನಾನಾ ವಿಧದ ವಿಹಿತಧರ್ಮ ತೊರೆದೂ ॥ ನಾನು ನನ್ನದು ಯೆಂಬ ಹೀನಬುದ್ಧಿ ಗಳಿಂದ । ಹೀನಜನರೊಡನಾಡಿ ಜ್ಞಾನಿಗಳ ನಿಂದಿಸುವೆ ॥ ೧ ॥ ಏಕಾ ದಶಿಯು ಜರಿದು ಲೋಕವಾರ್ತೆಗಳಿಂದ । ಶ್ರೀಕಾಂತ ನಿನ್ನ ಸೇವೆಯನು ಮರೆದು ॥ ಬೇಕಾದ ವೈಷಿಕವ ಸ್ವೀಕರಿಸಿ ಲೋಕದೊಳು । ಸಾಕಿದವ ರನು ನಾ ನಿರಾಕರಿಸಿ ಬಾಳುವೆನು ॥ ೨ ॥ ಯೆನಗಿಂದಧಿಕರಾದವರ ಕೂಡ ದ್ವೇಷವನು । ಅನುಗಾಲ ಮಾಡುವೆನು ಅನಿಮಿಷೇಶಾ ॥ ಯೆನಗೆ ಸರಿಯಾದವರ ಕಂಡು ಮತ್ಸರಿಸುವೆನು । ಯೆನಗಿಂತ ನೀಚರನು ನೋಡಿ ನಾ ನಗುತಿಪ್ಪೆ ॥ ೩ ॥ ಕಾಸಿನಾಸೆಗೆ ಪೋಗಿ ದಾಸವೇಷವ ಧರಿಸಿ । ಮೋಸಮಾಡುವೆ ಜನರ ಪಾಶದಿಂದಾ ॥ ವಾಸುದೇವನೆ ಸರ್ವ ದೇಶಕಾಲಾದಿಗಳಿ । ಗೀಶನೆಂದರಿಯದಲೆ ಮೋಸಹೋದೆನೊ ಸ್ವಾಮಿ ॥ ॥ ೪ ॥ ಸಕಲ ದುರ್ಗುಣಕೆ ಆಗರ ನಾನವನಿಯೊಳು । ಭಕುತಿ ವೈರಾಗ್ಯ ಪ್ರಸಕುತಿ ಇಲ್ಲಾ ॥ ಭಕತವತ್ಸಲ ಗುರು ಜಗನ್ನಾಥವಿಟ್ಠಲನೆ । ಅಕ ಳಂಕಮಹಿಮನೆ ಮುಕುತಾಮುಕುತರಿಗೊಡೆಯ ॥ ೫ ॥ ಶ್ರೀಃ ॥

## ✓೫೨. ರಾಗ ಶಂಕರಾಭರಣ, ಅಟತಾಳ.

ನರಸಿಂಹ । ಪಾಹಿ ಲಕ್ಷ್ಮೀ । ನರಸಿಂಹ ॥ ಪಲ್ಲ ॥ ನರಸಿಂಹನ ಮಿಪೆ ನಾ ನಿನ್ನಾ । ಚಾರು । ಚರಣಕಮಲಕೆ ನೀ ಯೆನ್ನಾ ॥ ಆಹ ॥ ಕರವ ಪಿಡಿದು ನಿಜ ಶರಣನೆಂದೆನಿಸು ಭಾ । ಸುರ ಕರುಣಾಂಬುಧಿ ಗರುಡವಾಹನ ಲಕ್ಷ್ಮೀ ॥ ಅನುಪಲ್ಲ ॥ ತರಳಪ್ರಹ್ಲಾದನ ನುಡಿಯ । ಕೇಳಿ । ತ್ವರಿತದಿ

ಬಂದ್ಯೋ ಯೆನ್ನೊಡೆಯ । ಏನು । ಕರುಣಾಳು ಭಕ್ತರ ಭಿಡಿಯ । ವಿಚಾರ । ಲರಿಯದೆಂದೆಂದು ಕೆಂಗಿಡಿಯಾ ॥ ಆಹ ॥ ಭರದಿಂದುಗುಳುತ ಬೊಬ್ಬಿರಿದು ಬೆನ್ನೊತ್ತಿ ಕ । ರ್ಬುರಕಶಿಪುವಿನ ಹಿಂಗೊರಳ ಪಿಡಿದ ಲಕ್ಷ್ಮೀ ॥ ೧ ॥ ಪ್ರಳಯಾಂಬುನಿಧಿಘನಘೋಷ । ದಂತೆ । ಘುಳಿಘುಳಿ ಸುತಲಿ ಪ್ರದೋಷ । ಕಾಲ । ತಿಳಿದು ದೈತ್ಯನಲ್ಯತಿರೋಷ । ದಿಂದ । ಪ್ಪಳಿಸಿ ವೇದಿನಿಗೆ ನಿರ್ದೋಷ ॥ ಆಹ ॥ ಸೆಳದೆಳೆವುತ ಚರ್ಮ ಸುಲಿದು ಕೆನ್ನೆತ್ತರೋ । ಕುಳಿಯನಾಡಿದಿ ದೇಶವಳಿಗಳೊಳಗೆ ಲಕ್ಷ್ಮೀ ॥ ೨ ॥ ಕ್ರೂರ ಖಳನ ಘೋರಕರುಳಾ । ತೆಗ । ದ್ಹಾರವಮಾಡಿದ್ಯೋ ಸಜ್ಜಗೊರಳಾ । ಕಂ ಡು । ವಾರಿಜಾಸನಮುಖರರಳಾ । ಪುಷ್ಪ । ಭೂರಿಗರೆಯೆ ವೇಗ ತರಳಾ ॥ ಆಹ ॥ ಸೂರಿಪ್ರಹ್ಲಾದನ ತೋರಿ ತ್ವದಂಘ್ರಿ ಸ । ರೋರುಹ ಸಾರ್ದರು ಕಾರುಣ್ಯನಿಧಿ ಲಕ್ಷ್ಮೀ ॥ ೩ ॥ ಜಯ ಜಯ ದೇವವರೇಣ್ಯಾ । ವಹ । ಭ್ಭಯನಿವಾರಣನೆ ಅಗಣ್ಯಾ । ಗುಣಾ । ಶ್ರಯ ಘೋರ ದುರಿತ ಅರಣ್ಯಾ । ಧನಂ । ಜಯ ಜಗದೇಕ ಶರಣ್ಯಾ ॥ ಆಹ ॥ ಲಯವಿವರ್ಜಿತ ಲೋಕ ತ್ರಯವ್ಯಾಪ್ತ ನಿಜಭಕ್ತ । ಪ್ರಿಯ ಘೋರಾಮಯಹರ ದಯಮಾಡೆ ನ್ನೊಳು ಲಕ್ಷ್ಮೀ ॥ ೪ ॥ ಕುಟಿಲದ್ವೇಷದವನು ನೀನಲ್ಲ । ನಿನ್ನಾ । ಭ್ರುಕುಟಿ ಕಂಜಿದರು ಸುರರೆಲ್ಲ । ನರ । ನಟನೆ ತೋರಿದಿ ಲಕ್ಷ್ಮೀನಲ್ಲ । ನಾ ಪಾ । ಸಟಿಗಾಣೆನಪ್ರತಿಮಲ್ಲ ॥ ಆಹ ॥ ವಟಪತ್ರಶಯನ ಧೂರ್ಜಟಿವಂದ್ಯ ಜಗ ನ್ನಾಥ । ವಿಠಲ ಕೃತಾಂಜಲಿ ಪುಟದಿ ಬೇಡುವೆ ಲಕ್ಷ್ಮೀ ॥ ೫ ॥ ಶ್ರೀಃ ॥

✓೫೩. ರಾಗ ರೇಗುಪ್ತಿ, ಝಂಪೆತಾಳ.

ಶಿವ ಭಯವಿಲ್ಲ ಪರಾವರೇಶನ ಸಕಲ । ಠಾವಿನಲಿ ಚಿಂತಿಸುವ ಭಾವ ಜ್ಞರಿಂಗೇ ॥ ಪಲ್ಲ ॥ ದೇಶಕಾಲೋಚಿತ ಸುಧರ್ಮಗಿರ್ಮಗಳು ಸ । ನ್ಯಾಸ ಮೊದಲಾದಾಶ್ರಮೋಚಿತ ಸುಕರ್ಮಗಳು । ಮಾಸೋಪವಾಸ ವ್ರತ ಗೀತನೇಮಗೀಮ ವ್ಯಾಸಂಗಗೀಸಂಗವೂ ॥ ಆಸನ ಜಯಗಿಯ ಪ್ರದೋ ಷನಧ್ಯಾಯಗೀಯ । ಶ್ವಾಸಬಂಧನ ಉಪನ್ಯಾಸ ತೀರ್ಥಾಟನೆ ರ । ಮೇ ಶನ ಗುಣಗಳಟ್ಟಹಾಸದಲಿ ನೆನೆವುತ ನಿ । ರಾಸೆಯಿಂದಿರುತಿಪ್ಪ ಹರಿದಾಸ

ರಿಗೆ ॥ ೧ ॥ ಸ್ನಾನಜಪ ದೇವತಾರ್ಚನೆ ವೈಶ್ವದೇವ ಬಲಿ। ದಾನ ಪಾತ್ರಾಪಾತ್ರ ವಿಧಿನಿಷೇಧಗಳು ವಿ। ಜ್ಞಾನವಿಹಿತಾಚರಣೆ ಸರ್ವತ್ರ ವಿನಯುಸುಸಹನ ವೈರಾಗ್ಯಭಕ್ತಿ ॥ ಶ್ರೀನಿವಾಸನ ಪರಮ ವಿಮಲಲೋಕೈಕಕ । ಲ್ಯಾಣಗುಣರೂಪಕ್ರಿಯಗಳನು ಜಡಚೇತನದಿ । ಧ್ಯಾನಿಸುತ ಮನದಿ ಹಿಗ್ಗುತ ತುತಿಸಿ ನಲಿವ ಸುಮ । ಹಾನುಭಾವಜ್ಞರಿಗೆ ಈರೇಳು ಲೋಕದಲೀ ॥ ೨ ॥ ಮಲಿನರಾಗಿಹರು ನೋಳ್ಪರಿಗೆ ಪ್ರತಿದಿನದಲ್ಲಿ। ಸುಲಭರಾಗಿಹರು ದುರ್ಗಮರಾಗಿ ತೋರುವರು । ಅಳುವರೊಮ್ಮೊಮ್ಮೆ ಪರವಶವಾಗಿ ನೈಮರದು। ನಲಿವರೊಮ್ಮೊಮ್ಮೆ ನಗುತಾ ॥ ಜಲಜಾಕ್ಷ ನಮಲ ಮಂಗಳಕಥೆಯ ಕೇಳಿ ಗಂ । ಟಲ ಶಿರಗಳುಬ್ಬಿ ಚಪ್ಪಳೆಗಳಿಂ ಬಾರಿಸುತ। ಮುಳುಗಿ ಸುಖವನಧಿಯೊಳು ತನುವು ಪುಳಕೋತ್ಸಹದಿ। ಇಳೆಯೊಳಗೆ ಸಂಚರಿಪ ಕಲುಷವರ್ಜಿತರಿಗೇ ॥ ೩ ॥ ನೋಡುವದೇ ಹರಿಮೂರ್ತಿ ಕೇಳುವದೆ ಹರಿಕೀರ್ತಿ। ಆಡುವದೆ ಹರಿವಾರ್ತೆ ಮಾಡುವದೆ ಹರಿಪೂಜಾ । ನೀಡುವದೆ ಅವಧಾನ ಬೇಡುವದೆ ಪುರುಷಾರ್ಥ । ಕೂಡುವದೆ ಸಾಯುಜ್ಯವೂ। ದಾಡಿಯಿಂದಲಿ ದನುಜರಳಿದು ಧರಣಿಯ ತಂದ। ಕ್ರೋಡ ರೂಪಕನೆ ಲೋಕಕ್ಕೆಲ್ಲ ಆನಂದ । ನಾಡಾಡ ದೈವದಂತಿವನಲ್ಲ ವೆಂದು ಕೊಂ। ಡಾಡುತವನಿಯಲಿ ಸಂಚರಿಸುವ ವಿಪಶ್ಚಿತರಿಗಾ ॥ ೪ ॥ ಕುಟಿಲರಹಿತರು ಧರ್ಮಕರ್ಮಾರ್ಥಮುಕುತಿ ಸಂ। ಘಟಿಸಲೆಮಗೆಂದು ಸುರನದಿಮುಖ್ಯತೀರ್ಥ ವೆಂ । ಕಟಶೈಲವೊದಲಾದ ಕ್ಷೇತ್ರದಲಿ ಸತ್ಕರ್ಮ । ಹಠದಿಂದ ಮಾಳ್ಪರೆಲ್ಲಾ ॥ ವಟಪತ್ರಶಯನನೊಲುಮೆಯನೆ ಬಯಸುತಜಾಂಡ। ಕಟಹಶಬ್ದದಿ ವ್ಯಾಪ್ತನಾದ ಶ್ರೀಜಗನ್ನಾಥ। ವಿಠಲ ಗಾವಾವ ದೇಶದಿ ಕಾಲದಲ್ಲಿ ಪಾ। ಸಟಿಯಿಲ್ಲವೆನುತಲಾರ್ಭಟಿಸಿ ಚೀರುವರಿಗೆ ॥ ೫ ॥ ಶ್ರೀಃ ॥

✓೫೪. ರಾಗ ನಾಟಿ, ಝಂಪೆತಾಳ.

ಪ್ರಣವಪ್ರತಿಪಾದ್ಯ ಪ್ರಹ್ಲಾದವರದಾ। ಪ್ರಣತಕಾಮದನೆ ಪ್ರಾರ್ಥಿಸುವೆ ಪ್ರಭುವೆಂದೂ ॥ ಪಲ್ಲ ॥ ಸಕಲಜೀವಜಡಾತ್ಮಕಜಗತಿನೊಳಗಿದ್ದು । ಅಕಳಂಕನಾಮ ರೂಪದಲಿ ಕರಿಸಿ ॥ ಪ್ರಕಟನಾಗದಲೆ ಮಾಡಿಸಿ ಸರ್

ವ್ಯಾಪಾರ । ಸುಖದುಃಖಗಳಿಗೆ ಗುರಿಮಾಡಿ ಯೆಮ್ಮನು ನೋಳ್ಪೆ ॥ ೧ ॥ ಏನೆಂಬೆ ನಿನ್ನ ಮಹಿಮೆಗೆ ರಮಾಪತಿ ನಿನ್ನ । ಧೀನರಲ್ಲವೆ ತತ್ವಮಾನಿ ಸುರರು ॥ ದಾನವಾಂತಕನೆ ವಿಜ್ಞಾಪನವ ಕೈಕೊಂಡು । ದೀನರುದ್ಧರಿಸುವದು ದಯದಿಂದ ನಿರತಾ ॥ ೨ ॥ ಸರ್ವಸ್ವತಂತ್ರನೀನಾದ ಕಾರಣ ಬ್ರಹ್ಮ । ಶರ್ವಾದಿ ಸುರರು ಪ್ರಾರ್ಥಿಸುತಿಪ್ಪರು ॥ ದುರ್ವಿಭಾವ್ಯನೆ ಸುರರಿಗಮೃತಪಾನವಗೈಸಿ । ಗರ್ವಿಸಿದ ದಾನವರ ಗಣವ ಸಂಹರಿಪೆ ॥ ೩ ॥ ಬುಧ್ಯಾದಿಯಿಂದ್ರಿಯಗಳೊಳಗೆ ತತ್ಪತಿಗಳೊಳ । ಗಿದ್ದು ಬಹುವಿಧ ಚೇಷ್ಟೆಗಳನೆ ಮಾಡಿ ॥ ಬದ್ಧರನೆ ಮಾಳ್ಪೆ ಭವದೊಳಗೆ ಜೀವರನ ನಿ । ರುದ್ಧನೆಂದೆನಿಪೆ ಯೆಲ್ಲರೊಳು ವ್ಯಾಪಕನಾಗಿ ॥ ೪ ॥ ದಾಶರಥಿ ನೀನೆ ಗತಿಯೆಂದು ಮರೆಹೊಕ್ಕ ವಿ । ಭೀಷಣಗೆ ಲಂಕಾಧಿಪತ್ಯವಿತ್ತೇ ॥ ವಾಸವಾನುಜ ಜಗನ್ನಾಥವಿಟ್ಠಲ ಭಕ್ತ । ಪೋಷಕನು ನೀನಹುದು ಕಲ್ಪಕಲ್ಪಗಳಲ್ಲಿ ॥ ೫ ॥ ಶ್ರೀಃ ॥

## ೫೫. ರಾಗ ಸಾವೇರಿ, ಅಟತಾಳ.

ರುದ್ರಾಂತರ್ಗತನಾರಸಿಂಹ । ಪಾಹಿ । ಭದ್ರಮೂರುತಿನಿರ್ಗತಾಂಹ ॥ ॥ ಪಲ್ಲ ॥ ಹೃದ್ರೋಗ ಕಳದು ಜ್ಞಾನಾರ್ದ್ರಸ್ವಾಂತನ ಮಾಡು । ಪದ್ರಸಾಮಗಘಸಮುದ್ರ ದಾಟಿಸಿ ಬೇಗ ॥ ಅನುಪಲ್ಲ ॥ ಏಸೇಸು ಕಲ್ಪಗಳಲ್ಲಿ । ನಿನ್ನ । ದಾಸನಾನೆಂಬುದು ಬಲ್ಲಿ ॥ ಈಶ ನೀನೆಂಬುದು ಲೇಶವರಿಯೆ ಕ್ಲೇಶ । ನಾಶನಪ್ರಭುವೆ ವಾರಾಶಿಜೆವಲ್ಲಭ ॥ ವಾಸವಾನುಜ ವನಧೀಶಯನ ಮಹೇಶ ವಂದಿತ ವರದ ಹೇ ಕರು । ಣಾಸಮುದ್ರ ಕರಾಳವದನನೆ । ನೀ ಸಲಹದಿರೆ ಕಾಣೆ ಕಾಯ್ವರ ॥ ೧ ॥ ಹೇಮಕಶ್ಯಪು ತನ್ನ ಸುತನಾ । ನೋಯಿಸೆ । ಶ್ರೀಮನೋಹರನೆ ಆನತನಾ ॥ ವ್ಯೋಮಪರ್ವತಾಂಬುಧಿ ಧಾಮದೊಳುಳುಹಿದ । ಭೂಮಸನ್ಮುನಿಗಣಸ್ತೋಮವಂದಿತ ಪಾದ ॥ ಸಾಮಜೇಂದ್ರನ ಸರಸಿಯೊಳು ಸು । ತ್ರಾಮನಂದನನಾರಣಾದಿ ಕುರು । ಭೂಮಿಪತಿಸಭೆಯೊಳಗೆ ದ್ರೌಪದಿಯಾ ಮಹಾತ್ಮರ ಕಾಯ್ದ ಕರುಣಿ ॥ ॥ ೨ ॥ ವೇದಗಮ್ಯ ವೇದವ್ಯಾಸಾ । ಕಪಿಲ । ಯಾದವೇಶ ಮಹಿದಾಸಾ ॥

ಶ್ರೀದ ಶ್ರೀಶ ಅನ್ನಾದಿ ವಿಶ್ವಧನ್ವಂತ್ರೀ । ಮೇಧಾವಿಪತಿಯೇ ವಾಮಾದಿ ರೂಪಕ ವಿಷ್ಣು ॥ ಕಾದುಕೋ ನಿನ್ನವರ ಮನದ ವಿಷಾದರೋಗಂಗಳ ನಳಿದು ಮಹ । ದಾದಿದೇವ ಜಗನ್ನಾಥವಿಠಲ ಆದರದಿ ಪ್ರಹಲ್ಲಾದ ವರದಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೬. ರಾಗ ಕಾಂಬೋಧಿ, ಅಟತಾಳ.

ಮನವೇ ಮರವರೇನೋ ಹರಿಯಾ । ಬಹು । ಜನುಮಗಳಲಿ ಬಟ್ಟ ಭವಣೆಗಳರಿಯಾ ॥ ಪಲ್ಲ ॥ ವಿಷಯಚಿಂತನೆ ಮಾಡಸಲ್ಲ । ಮೋಷ । ವೃಷಣನಾದನು ಕೇಳೊ ಪೌಲೋಮಿ ನಲ್ಲಾ ॥ ಝುಷಕೇತುವಿನ ವ್ಯಾಳ ಹೊಲ್ಲಾ । ನಿರಾ । ಸಿಷನಾಗು ಯಮರಾಯನೆಂದೆಂದು ಕೊಲ್ಲಾ ॥ ೧ ॥ ಧನವೇ ಜೀವನವೆಂಬಿ ನಿನಗೆ । ಸುಯೋ । ಧನ ನೋಡು ಧನದಿಂದ ಏನಾದ ಕೊನೆಗೆ ॥ ಅನಿರುದ್ಧದೇವನ ಮನೆಗೆ । ಪೋಷ । ಘನವಿಜ್ಞಾನವನೆ ಸಂಪಾದಿಸು ಕೊನೆಗೆ ॥ ೨ ॥ ಹಲವು ತೀರ್ಥಗಳಲಿ ಸ್ನಾನ । ಮಾಡೆ । ಮಲ ಪೋದಿತಲ್ಲದೆ ನಿರ್ಮಲಜ್ಞಾನ ॥ ಫಲಿಸದು ಯೆಂದಿಗೂ ಹೀನ । ಬುದ್ಧಿ । ಕಳದು ಸೇವಿಸು ಸಾಧುಗಳನನುದಿನಾ ॥ ೩ ॥ ಹರಿದಾಸನಾಗಿ ನೀ ಬಾಳು । ಗುರು । ಹಿರಿಯರ ಪಾದಕಮಲಕೆ ನೀ ಬೀಳು ॥ ನರರ ನಿಂದಾಸ್ತುತಿ ತಾಳು । ದೇಹ । ಸ್ಥಿರವಲ್ಲ ಸಂಸಾರ ಬಲು ಹೇಯ ಕೇಳೂ ॥ ೪ ॥ ಜಿತವಾಗಿ ಕೇಳೋ ಈಸೊಲ್ಲಾ । ಹರಿ । ಕಥೆಯಲ್ಲಿ ನಿರತನಾಗಿರು ಲೋಹಕಲ್ಲಾ ॥ ಪ್ರತಿಮೆ ಪೂಜಿಸಿದರೇ ನಿಲ್ಲಾ । ಪರೀ । ಕ್ಷಿತನೆಂಬೋರಾಯ ಈಮಹಿಮೆಯ ಬಲ್ಲಾ ॥ ೫ ॥ ಜ್ಞಾನೇಚ್ಛ ಕ್ರಿಯಾಶಕ್ತಿತ್ರಯವಾ । ಸ್ಮರಿಸು । ತಾನಂದಪಡು ಬಯಸದಿರುಭಯವಾ ॥ ಸಾನುರಾಗದಿ ಬೇಡು ದಯವಾ । ನೀ ಮ । ದ್ದಾನೆಯಂದದಿ ಸಂಚರಿಸು ಬಿಟ್ಟು ಭಯವಾ ॥ ೬ ॥ ಭಾವಕ್ರಿಯಾದ್ರವ್ಯಾದ್ವೈತಾ । ನೀನು । ಆವಾಗ ಚಿಂತಿಸೋ ಭೂವ್ಯಾದಿಭೂತಾ ॥ ಜೀವಂಗಳು ಜಗನ್ನಾಥ । ವಿಠಲ । ಗಾವಾಸವೆಂದು ನೀ ತಿಳಿಯೋ ಸತತಾ ॥ ೭ ॥ ಶ್ರೀ ॥

## ೫೭. ರಾಗ ಕಾಂಬೋಧಿ, ಝಂಪೆತಾಳ.

ಕನಕಮುನಿಕರಕಮಲ ಪೂಜಿತಾಂಘ್ರಿ । ಮನುಜಮೃಗವೇಷ ಮಾರ ಮಣ ನಿನಗಾನಮಿಪೇ ॥ ಪಲ್ಲ ॥ ನಿರ್ದುಷ್ಟ ನಿರವದ್ಯ ನಿರವಧಿಕ ಮಹ ಮಹಿಮ । ಸ್ವಧರ್ಮನಿಪಿತನೆ ಸಮಾಭ್ಯಧಿಕಶೂನ್ಯ ॥ ವರ್ಧಿಸಲಿ ನಿನ್ನಲ್ಲಿ ಸದ್ಭಕ್ತಿ ಖಳಸಂಪ್ರ । ಮರ್ದನ ಮಮ ಸ್ವಾಮಿ ಸರ್ವರಂತರ್ಯಾಮಿ ॥೧॥ ತೀರ್ಥಪದ ನಿನ್ನ ಸತ್ಕೀರ್ತಿ ಸಲ್ಲಾಪ ಸಂ । ಕೀರ್ತಿಸುವ ಭಕ್ತರ ಭವಾಪ ಹರನೇ ॥ ಪಾರ್ಥಸಖ ಸರ್ವದಾ ಪ್ರಾರ್ಥಿಸುವೆ ನಿನ್ನ ಚಿ । ನ್ಮೂರ್ತಿಯನೆ ತೋರಿ ಸಂಪೂರ್ತಿಸಲಿ ಮನ್ಮನವು ॥ ೨ ॥ ಸೂತ್ರನಾಮಕ ಪ್ರಾಣಮಿತ್ರ ಭಾರತ ಪಂಚ । ರಾತ್ರಾದಿ ಆಗಮ ಸ್ತೋತ್ರಪ್ರಿಯ ॥ ಕ್ಷೇತ್ರಜ್ಞ ಶ್ರೀಜ ಗನ್ನಾಥವಿಟ್ಠಲ ಅಹೋ । ರಾತ್ರಿಯಲಿ ನಿನ್ನವರ ಸಹವಾಸ ಕೊಡು ಯೆನಗೆ ॥ ೩ ॥ ಶ್ರೀಃ ॥

## ೫೮. ರಾಗ ಧನ್ಯಾಸಿ, ಆದಿತಾಳ.

ರಾಘವೇಂದ್ರ । ರಾಜಿತ ಗುಣಸಾಂದ್ರಾ ॥ ಪಲ್ಲ ॥ ರಾಘವೇಂದ್ರಗುರು ರಾಯ ಘೋರಪಾ । ಪೌಘಗಳೆಣಿಸದೆ ಪಾಲಿಸೋ ಬಿಡದೆ ॥ ಅನುಪಲ್ಲ ॥ ಪ್ರಕಟಿಸಿ ತೋರಿದಿ ಮುಕುತಿಯ ಬೇಡಿದ । ಭಕತನ ಯೋಗ್ಯತಿ ನಿಖಿಳ ಜನರಿಗೆ ॥ ೧ ॥ ಭೃತ್ಯಗೆ ಬಂದಪಮೃತ್ಯು ಕಳದು ಸುಖ । ವಿತ್ತುಪ್ರೊರದೆ ಪುರುಷೋತ್ತಮದಾಸಾ ॥ ೨ ॥ ಹುತವಹಗುಣಿಸಿದ ರತುನಮಾಲಿಕೆಯ । ಕ್ಷಿತಿಪಗೆ ತಂದಿತ್ತತುಳಮಹಿಮನೆ ॥ ೩ ॥ ಕನಲಿದ ಜನಪನ ಅನುನಯ ದಲಿ ನಿ । ನ್ನಣುಗನ ಮಾಡಿದಿ ಘನತರಚರಿತಾ ॥ ೪ ॥ ಚೂತಫಲರಸದಿ ಪೋತ ಮುಳುಗೆ ಮೃತ್ಯು । ಭೀತಿಬಿಡಿಸಿದ ಅನಾಥರಕ್ಷಕಾ ॥ ೫ ॥ ಕ್ಷಿಪ್ರದಿ ತೋರಿದಿ ವಿಪ್ರರ ಮಹಿಮೆಯ । ಆಪೃಥಿವೀಶಗೆ ಅಪ್ರತಿಗುರು ವೇ ॥ ೬ ॥ ಪತಿತನ ನಿಜಯೋಗ್ಯತೆಯನರಿತು ಸ । ದ್ಗತಿಯ ಪಾಲಿಸಿದೆ ಯತಿಕುಲವರ್ಯಾ ॥ ೭ ॥ ಮಳಲ ಮಾರ್ಗದೊಳು ಲಲನೆ ಪ್ರಸೂತಿಸೆ । ಪುಲಿನಕಮಂಡಲದೊಳ್ ಜಲತೋರ್ದೆ ॥ ೮ ॥ ಬಿಸಲಿಂದಳುವಾ ಶಿಶು ವಿಗೆ ಚೈಲಾ । ಗಸದಲಿ ನಿಲಿಸಿದ್ಯೋ ಅಸಮ ಮಹಿಮನೇ ॥ ೯ ॥ ದ್ವಾದ ಶವರ್ಷಾನ್ನೋದಕಸಲಿಸಿದೆ । ಮೇದಿನಿಪತಿಗೆ ಮಹಾದಯವಂತಾ ॥

॥ ೧೦ ॥ ಸಾದರದಲಿ ಹಸ್ತೋದಕ ಕೊಡಲು ನಿ । ಷೇಧಗೈಯ್ಯದೆ ನಿವೇದಿಪೆ ಹರಿಗೆ ॥ ೧೧ ॥ ಪಾದೋದಕವ ದಿನೇದಿನೆ ಸೇವಿಪ । ಸಾಧುಗಳಾಧಿವ್ಯಾಧಿಗಳಳಿವೇ ॥ ೧೨ ॥ ಯತಿವರ ದೂರದಿ ವೃತಗೈಯುಲಾಗಸ । ಪಥದಲಿ ಕಂಡು ನುತಿಸಿದ ಮಹಿಮಾ ॥ ೧೩ ॥ ವಿಪಿನದಿ ಚಂಡಾತಪದಿ ಬೆಂದ ಕಾ । ಶ್ಯಪಿಸುರನುಳುಹಿದ ಕೃಪಣಜನಾತ್ಮಾ ॥ ೧೪ ॥ ಅನಿವೇದಿತ ಭೋಜನವಸ್ತುಗಳಿಂ । ದನುಭವ ಮಾಡಿಸಿದನುಪಮಚರಿತಾ ॥ ॥ ೧೫ ॥ ಭಾಷಾತ್ರಯಯುತ ವ್ಯಾಸೋಕ್ತಿಗಳ ಪ್ರ । ಕಾಶವ ಗೈಸಿದ ಭೂಸುರವಿನುತಾ ॥ ೧೬ ॥ ದಾತ ಗುರು ಜಗನ್ನಾಥವಿಟ್ಠಲನ । ದೂತನೆ ಮಂತ್ರನಿಕೇತನ ನಿಲಯಾ ॥ ೧೭ ॥ ಶ್ರೀಃ ॥

## ೫೯. ಶ್ರೀರಾಗ, ಅಟತಾಳ.

ನಮಿಸಿ ಬೇಡುವೆ ವರಗಳ ನಿನ್ನಾ । ಸಂ । ಯಮಿಕುಲೋತ್ತಮ ರಾಘವೇಂದ್ರರನ್ನಾ ॥ ಪಲ್ಲ ॥ ವಿಮಲಸುಮತಿ ಜನರತಿಪ್ರಿಯಾ । ಪಾದ । ಕಮಲಸುಮತಿ ಜನರತಿಪ್ರಿಯಾ ॥ ಶಮಲವರ್ಗದಲಿ ನೀಯದಿರೋ ಮತಿಯಾ । ಅಮಿತ ಕರುಣದಿ ಪಿಡಿಯೋ ಕೈಯ್ಯಾ ॥ ೧ ॥ ಕಂಡಕಂಡವರನು ಬೇಡಿನೊಂದೆ । ಕ । ಮಂಡಲು ದಂಡಧಾರಿ ನೀ ಗತಿಯೆಂದೇ ॥ ಪಂಡಿತಾಗ್ರಗಣ್ಯ ಇನ್ನಾರು ಮುಂದೇ । ಕೋ । ದಂಡಪಾಣಿಯ ಪಾದ ತೋರಿಸು ತಂದೇ ॥ ೨ ॥ ಶ್ರೀಸುಧೀಂದ್ರಯತಿಕರಕಂಜ ಜಾತಾ । ತುಂ । ಗಾಸುನದಿನಿಲಯಾಗಂಬುಧಿಪೋತಾ ॥ ವಾಸುಕಿಶಯನ ಗುರು ಜಗನ್ನಾಥ । ವಿಠಲ । ದಾಸರ ಪೋಷಕ ಲಾಲಿಸೀ ಮಾತಾ ॥ ೩ ॥ ಶ್ರೀಃ ॥

## ೬೦. ರಾಗ ಸೌರಾಷ್ಟ್ರ, ಅಷ್ಟತಾಳ.

ಪಾಹಿಮಾಂ ಪಾಹೀ । ಪ್ರಹಲ್ಲಾದ ವರದಾ ॥ ಪಲ್ಲ ॥ ಪಾಹಿ ಪದ್ಮದಳಾಯತಾಂಬಕ । ಪಾಹಿ ಪದ್ಮಾರಮಣ ಪರತರ । ಪಾಹಿ ಪದ್ಮಾಸನ ಜನಕ ಮಾಂ । ಪಾಹಿ ಪನ್ನಗನಗನಿಕೇತನ ॥ ಅನುಪಲ್ಲ ॥ ವಾಸುದೇವಾನಂತ ವೇದವ್ಯಾಸ ದತ್ತಾತ್ರೇಯ ಹಂಸ ಹ । ಯಾಸುರಾರ್ದನ ಚಿ

ಋಷಭ ಮಹಿದಾಸ ತಾಪಸ ಯಜ್ಞನಾಮಕ । ವಾಸವಾನುಜ ವಿಶ್ವ ತೈಜಸ ಕೇಶವಾ ಕೈವಲ್ಯದಾಯಕ । ಕೇಶಿಭಂಜನ ವೈಜಯಂತಿವಿಭೂಷಣ ವಿಶೇಷಜ್ಞ ಭೂರಿದ ॥ ಪಾಹಿ ॥ ೧ ॥ ಮಾಧವ ಪ್ರದ್ಯುಮ್ನ ಮಧ್ವಾರಾಧಿತಪಾದಾಂಬುಜ ಅಧೋಕ್ಷಜ । ಶ್ರೀಧರ ಜನಾರ್ದನ ತ್ರಿವಿಕ್ರಮ ವೇದಗರ್ಭ ವಿರಿಂಚಿನುತ ಗ ॥ ದಾಧರ ಗಯಾಸುರವಿಮರ್ದನ ಮೋದಮಯ ಭೂದೇವಿಪ್ರಿಯ ದಾ । ಮೋದರ ದಯಾಸಾಂದ್ರ ಧಾರ್ಮಿಕಾನಾದಿಪುರುಷನೆ ನಮಿಪೆ ಸಂತತ ॥ ಪಾಹಿ ॥ ೨ ॥ ನಂದಗೋಪಕುಮಾರ ಗೋಪೀವೃಂದತೋಷಿತ ಅನಿಮಿಷೇಶ ಸಂ । ಕ್ರಂದನ ಸದಾಪೂಜ್ಯ ವರ ಕಾಲಿಂದಿತಟ ಸುವಿಹಾರಿ ಪಾಂಡವ ॥ ಬಂಧೋ ನೃಪಮುಚುಕುಂದ ವರದ ಅಂಧಕಜರಿಪುವೃಕೋದರಪ್ರಿಯ । ಇಂದಿರಾ ಸನ್ಮಂದಿರನೆ ಗೋವಿಂದ ಗೋಗೋಪಾಲಪಾಲಕ ॥ ಪಾಹಿ ॥ ೩ ॥ ಮೀನ ಕೂರ್ಮ ಕ್ರೋಡ ನರಹರಿ ಮಾಣವಕ ಭೃಗುರಾಮ ಮುಖ್ಯ । ಪ್ರಾಣಪ್ರಿಯ ರಾವಣಕುಲಾಂತಕ ಧೇನುಕಾಸುರಮಥನ ವಸ್ತ್ರ ವಿ ॥ ಹೀನಬುದ್ಧನೆ ಕಲ್ಕಿ ಕಲಿಮುಖದಾನವಾಂತಕ ಧರ್ಮವಿತ್ತು ಪ್ರ । ಧಾನ ಪುರಷೇಶ್ವರ ಕೃಪಾಕರ ಜ್ಞಾನಬಲಸುಖಪೂರ್ಣ ಪೋಷಕ ॥ ಪಾಹಿ ॥ ೪ ॥ ನೀತ ನಿಜಬಲ ಮಾತುಳಾಂತಕ ಶ್ವೇತವಾಹನಸೂತ ತ್ರಿಗುಣಾ । ತೀತ ಭವ ನಿಧಿಪೋತ ಮೋಕ್ಷನಿಕೇತನಪ್ರದ ಭೂತಭಾವನ ॥ ಧೌತಪಾತಕವ್ರಾತ ತ್ರಿಜಗಖ್ಯಾತ ನಿರ್ಗತಭೀತಭಕ್ತಿಸು । ವೇತನಪ್ರಿಯ ದಾತ ಅಷ್ಟವಿಭೂತಿದಾ ಜಗನ್ನಾಥವಿಠಲಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೧. ರಾಗ ಕೇತಾರಗೌಳ, ಅಟತಾಳ.

ನಿನ್ನವರಾಧರ್ಮ ವಿಹಿತವಾಗುವದು ಮ । ತ್ತನ್ಯರಾಚರಿಸಿದ ಧರ್ಮ ಅಧರ್ಮ ॥ ಪಲ್ಲ ॥ ಕಡಲಮಥನದಿ ಕಪರ್ದಿ ಕಾಳಕೂಟ । ಕುಡಿಯಲು ಕಂಠಭೂಷಣವಾಯಿತು ॥ ಒಡನೆ ರಾಹುಕೇತು ಸುಧೆಯ ಪಾನಮಾಡಿ । ..ಡಿದರೆಂಬುದು ಮೂರು ಜಗ ನೆರೆವರಿಯೆ ॥ ೧ ॥ ಬಲಿ ನಿಜ್ಞಾ ಮುಕುಟ

ಕದ್ರೊಯ್ಯೆ ಪಾತಾಳಕೆ । ಸಲೆ ಭಕ್ತನೆಂದು ಬಾಗಿಲ ಕಾಯಿದೆ ॥ ಇಳೆಯೊಳು ಸುರರಿಗೆ ಗೋಭೂಹಿರಣ್ಯವಿತ್ತಾ । ಖಳಜರಾಸಂಧನ ಕೊಲಿಸಿದೆ ಹೋಗೀ ॥ ೨ ॥ ಪತಿವ್ರತಧರ್ಮನಿರತರಾದ ತ್ರಿಪುರರ । ಸತಿಯರು ಶಿವನಿಂದ ಹತರಾದರು ॥ ಕೃತಭುಜಾಗುರುಸತಿ ಉಡುಪತಿಯಿಂದಲಿ । ಸುತರ ಪಡದು ನಿತ್ಯಾಸ್ಮರಣಿಯೊಳಿರಲು ॥ ೩ ॥ ಮೇದಿನಿಯೊಳು ಪ್ರಾಣಿಹಿಂಸಕನೆನಿಸಿದಾ । ವ್ಯಾಧನಾ ಯಮಿಕುಲೇಶನ ಮಾಡಿದೆ ॥ ವೇದೋಕ್ತಕರ್ಮವಾಚರಿಸಿದ ಜಿನನೊಳ್ । ಪ್ರಾದುರ್ಭೂತನಾಗಿ ಕೆಡಹಿದೆ ತಮಕೇ ॥ ॥ ೪ ॥ ಪಾರಾಶರನು ಸತ್ಯವತಿಯು ಸಂಬಂಧಿಸೆ । ಶ್ರೀರಮಣನೆ ಅವತರಿಸಿದ್ಯಲ್ಲಿ ॥ ವಾರಿಜಾಸನ ಭವಸರೋಜ ಕನ್ನಿಕೆಯಾ । ಸಾರಿದವರಭೀಷ್ಟಾ ಜಗನ್ನಾಥವಿಠಲಾ ॥ ೫ ॥ ಶ್ರೀಃ ॥

## ೬೨. ರಾಗ ಮಧ್ಯಮಾವತಿ, ಆದಿತಾಳ.

ಶಿವನೀನ್ಹ್ಯಾಗಾದ್ಯೋ । ನರಪಶು । ಹರನೀನ್ಹ್ಯಾಗಾದ್ಯೋ ॥ ಪಲ್ಲ ॥ ಶಿವ ನೀನಾದರೆ ಶಿವನ ರಾಣಿ ನಿನ । ಗ್ಯಾವತಿ ಆದಳಲ್ಲೋ ಅವಿವೇಕಿ ಮನುಜಾ ॥ ಅನುಪಲ್ಲ ॥ ಗರಳಕೊರಳಲಿ ಧರಿಸಿದ ದೇವನ । ಸರಿಯಾಗುವಿಯಂತೊದರುತಿದಿ ॥ ಪರಮಾನ್ನದಿ ಮಕ್ಷಿಕ ಬೀಳಲು ಉಂ । ಡರಗಿಸಿಕೊಳ್ಳದ ಅತಿಹೇಯಪ್ರಾಣಿ ॥ ೧ ॥ ಕುಂಡಲಿಭೂಷಣ ಚಂಡ ವಿಕ್ರಮಕ । ಮುಂಡಲುಧರನು ನಾನೆಂಬೀ ॥ ಕಂಡರೆ ಸರ್ಪನ ನಿಲ್ಲದೆ ಓಡುತೀ । ಹೆಂಡಗಾರ ಹೆಣಮುಂಡೇಗಂಡಾ ॥ ೨ ॥ ನಂದಿವಾಹನ ಪುರಂದರಾದಿಸುರ । ವಂದ್ಯಹರನೇ ನಾನೆಂತೆಂಬೀ ॥ ಮಂದಮತಿಯೆ ಒಂದಿನ ಯೆತ್ತೇರಲು । ಮಂದಿಯೊಳಗೆ ಬಹು ನಿಂದಿತನಾಗುವೀ ॥ ೩ ॥ ವೀತಾಂಬರ ನಿರ್ಭೀತಭೂತಗಣ । ನಾಥನೆ ನಾನೇ ಯೆಂತೆಂಬೀ ॥ ಘೋತರ ಬಿಟ್ಟರೆ ಪಾದರಕ್ಷೆಯಲಿ । ಘಾತಿಸುವರು ನಿನ್ನ ಭೂತಸೋಕಿತೆಂದು ॥ ೪ ॥ ಹಸ್ತಿ ಚರ್ಮಧರ ಅಸ್ಥಿಕಂಧರಾ ಸ । ಮಸ್ತ ಜಗದ್ಗುರು ನಾನೆಂಬೀ ॥ ಹಸ್ತದಿಂದ ಒಂದಸ್ಥಿ ಪಿಡಿದರೆ । ಸ್ವಸ್ಥಳದಿಂದ ನಿರಸ್ತನ ಮಾಳ್ಪರು ॥ ೫ ॥ ಮೃತ್ಯುಂಜಯ ಮುಪ್ಪುರಹರ ನಾನೇ । ಮತ್ತೊಬ್ಬರು ದಾರಿಲ್ಲೆಂಬಿ ॥

ಕತ್ತೆಯಂತೆ ನೀ ಒದರಿದರಾಯಿತೇ। ಸತ್ತರೆ ಹೊತ್ತೊಯ್ದಿಡುವರು ಕಾಡಿಲಿ ॥ ೬ ॥ ಮುತ್ತೊಂಭತ್ತು ವಿಧಾತನಬ್ಬ ಜಗ । ನ್ನಾಥವಿಠಲನ ಪೂಜಿಸಿದಾ ॥ ಆತನೆ ನಾನೆಂಬ ಮಾತು ಲೋಕದೊಳು । ಕೌತುಕವಾಗಿದೆ ಪಾತಕಿ ನರನೇ ॥ ೭ ॥ ಶ್ರೀಃ ॥

## ✓ ೬೩. ರಾಗ ಧನಾಸರಿ, ಆದಿತಾಳ.

ನೀಲಲೋಹಿತ । ಡಮರುಗತ್ರಿ । ಶೂಲಶೋಭಿತ ॥ ಪಲ್ಲ ॥ ಫಾಲನಯನ ಶಂ । ಡಾಲಚರ್ಮಸುದು । ಕೂಲ ವ್ಯಾಡ ಸತತ । ಪಾಲಿಸು ಕರುಣದಿ ॥ ಅನುಪಲ್ಲ ॥ ನಂದಿವಾಹನ । ನವಿ:ಪೆ ಖಳ । ವೃಂದವೋಹನ ॥ ಅಂಧಕರಿಪು ಶಶಿಭೂಷಣ ಸನಕಸ । ನಂದನಾದಿಮುನಿವಂದಿತಪದಯುಗ ॥ ೧ ॥ ಸೋಮಶೇಖರ । ಗಿರಿಜಸು । ತ್ರಾಮ ಲೇಖಗ ॥ ಸೋಮವಿನುತ ಭವಭೀಮ ಭಯಂಕರ । ಕಾಮರಹಿತ ಗುಣಧಾಮ ದಯಾನಿಧೇ ॥ ೨ ॥ ನಾಗಭೂಷಣ । ವಿಮಲ ಸು । ರಾಗಭಾಷಣ ॥ ಭೋಗಿಶಯನ ಜಗನ್ನಾಥವಿಠಲನ । ಯೋಗದಿ ಭಜಿಸುವ ಭಾಗವತರೊಳಿಡೋ ॥ ೩ ॥ ಶ್ರೀಃ ॥

## ೬೪. ರಾಗ ಭೂಪಾಳಿ, ಝಂಪೆತಾಳ.

ಸ್ಮರಿಸು ಗುರುಸಂತತಿಯನು । ಮನವೇ ॥ ಪಲ್ಲ ॥ ಸ್ಮರಿಸು ಗುರುಸಂತತಿಯ ಸರ್ವಕಾಲಗಳಲ್ಲಿ । ಪೊರೆವ ಹರಿಚತುರವಿಧಪುರುಷಾರ್ಥಗಳನಿತ್ತು । ಸ್ಮರಿಸು ಗುರುಸಂತತಿಯನು ॥ ಅನುಪಲ್ಲ ॥ ಪರಮಹಂಸಾಖ್ಯಹರಿ ಗುರುತಮನೆನಿಸುತಿಪ್ಪ । ಪರಮೇಷ್ಠಿ ತತ್ಸುತರು ಸನಕಾದ್ಯರಾ ॥ ಕರಕಮಲಸಂಜಾತ ದೂರ್ವಾಸ ಜ್ಞಾನನಿಧಿ । ಗರುಡವಾಹನತೀರ್ಥ ಕೈವಲ್ಯಯತಿವರರ ॥ ೧ ॥ ಜ್ಞಾನೇಶ ಪರತೀರ್ಥ ಸತ್ಯಪ್ರಜ್ಞ ಪ್ರಾಜ್ಞ । ಸೂನು ಸುತಪೋರಾಜವರಕುಮಾರಾ ॥ ಮೌನಿಕುಲವರ ಅಚ್ಯುತಪ್ರೇಕ್ಷರಂಘ್ರಿಗಳ । ಅನಮಿಷೆನನವರತ ಭಕ್ತಿಪೂರ್ವಕದೀ ॥ ೨ ॥ ಅಚ್ಛಿನ್ನಭಕ್ತ ಮರುತವತಾರ ಮಧ್ವಮುನಿ । ಪ್ರೋಚ್ಚಾಬ್ಜನಾಭ ನರಹರಿಮಾಧವಾ ॥ ಸಚ್ಚರಿತ ಅಕ್ಷೋಭ್ಯಮುನಿಪಪ್ರಭಿವಾದಿ ಭೂ । ತೋಚ್ಚಾ

ಟನವ ಗೈದ ಜಯತೀರ್ಥ ಗುರುವರರ ॥ ೩ ॥ ವಿದ್ಯಾಧಿರಾಜ ರಾಜೇಂದ್ರ ಸುತಪೋನಿಧಿ ಜ। ಯಧ್ವಜರ ಪುರುಷೋತ್ತಮ ಬ್ರಹ್ಮಣ್ಯರಾ। ಮಧ್ವ ಸಿದ್ಧಾಂತಸ್ಥಾಪಕ ವ್ಯಾಸರಾಯ ಪ್ರಸಿದ್ಧ ಶ್ರೀನಿವಾಸಯತಿಗಳ ಪವಿತ್ರ ಪದ ॥ ೪ ॥ ಲಕ್ಷ್ಮೀಕಾಂತರನ ಶ್ರೀಪತಿ ರಾಮಚಂದ್ರರನ । ಲಕ್ಷ್ಮೀವ ಲ್ಲಭ ಲಕ್ಷ್ಮೀನಾಥ ಪತಿಯಾ ॥ ಲಕ್ಷ್ಮೀನಾರಾಯಣರ ಶ್ರೀರಘುನಾಥ ಸು । ಭಿಕ್ಷುಗಳ ಜಗನ್ನಾಥಗುರುಗಳನಾ ॥ ೫ ॥ ಸಾನುರಾಗದಲಿ ಸರ್ವೋತ್ತಮನ ಮೂರ್ತಿ ವಿ। ಜ್ಞಾನಪೂರ್ವಕ ಭಜಿಸಿ ಸುಖಿಸುತಿಪ್ಪಾ ॥ ಶ್ರೀನಾಥ ಗುರುವರರ ಕರಕಮಲಜಾತ ವಿ। ದ್ಯಾನಾಥಯತಿಗಳನು ಅನುದಿನದಿ ಮರೆಯದಲೆ ॥ ೬ ॥ ವಿದ್ಯಾಧಿರಾಜರ ಕವೀಂದ್ರವಾಗೀಶರ ಸ್ವ। ಸಿದ್ಧಾಂತ ಸ್ಥಾಪಿಸಿದ ರಾಮಚಂದ್ರಾ ॥ ಅದ್ವೈತಮತಕುಮುದದಿನಪ ವಿಬುಧೇಂದ್ರಾರ್ಯ । ಸದ್ವೈಷ್ಣವಾಗ್ರಣಿ ಜಿತಾಮಿತ್ರಮುನಿವರರ ॥ ೭ ॥ ರಘುನಂದನ ಸುರೇಂದ್ರ ವಿಜಯೀಂದ್ರ ಸುಸುಧೀಂದ್ರ । ಸುಗುಣವಾರಿಧಿ ರಾಘವೇಂದ್ರಾರ್ಯರಾ ॥ ನಿಗಮಾರ್ಥಕೋವಿದ ಸುಯೋಗೀಂದ್ರ ಸೂರೀಂದ್ರ । ಜಗತೀತಳದಿ ಸುಪ್ರಸಿದ್ಧಸುಮತೀಂದ್ರರ ॥ ೮ ॥ ಸಾಧುಜನಸನ್ನುತ ಉಪೇಂದ್ರರಾಯರ ವೇದ । ವೇದಾಂಗಚತುರ ವಾದೀಂದ್ರಯತಿಯಾ ॥ ಭೇದಮತವಾರಿನಿಧಿಚಂದ್ರ ವಸುಧೇಂದ್ರ ವಿ। ದ್ಯಾದಾನಾಸಕ್ತ ವರದೇಂದ್ರಯತಿವರರ ॥ ೯ ॥ ರಾಮವೇದ ವ್ಯಾಸರಂಘ್ರಿಕಮಲಗಳ ಹೃ। ತ್ತಾಮರಸದೊಳು ಪೂಜಿಸಿದ ಬಗೆಯನು ॥ ಧೀಮಂತರಿಗೆ ತಿಳಿಸಲೋಸುಗದಿ ನವರತ್ನ। ಹೇಮಮಂಟಪ ವಿರಚಿಸಿದ ಭುವನೇಂದ್ರರಾ ॥ ೧೦ ॥ ಪವಮಾನಮತಪ್ರವರ್ತಕರೊಳುತ್ತಮರೆನಿಪ । ಭವಗೆದ್ದಾಸುಬೋಧ ಸುಜನೇಂದ್ರರಾ ॥ ಅವನಿತಳದೊಳಗೆ ಅಭ್ಯಧಿಕರನ ಮಾಡಿ ಸ। ತ್ಕವಿಗಳನೆ ಸಂತೈಸಲೆಂದು ಸ್ಥಾಪಿಸಿದವರ ॥ ೧೧ ॥ ಹರಿಯ ಸಂಸ್ಮರಣೆ ಅಹರ್ನಿಶಿಗಳಲಿ ಮಹವಿಪ । ತ್ಪರಿಹಾರ ಗೈಸುವದು ಗುರುಗಳ ಸ್ಮರಣೇ ॥ ಪರಮಸೌಖ್ಯವನೀವ ದಾವಾವ ಕಾಲದಲಿ। ಪೊರೆವ ಜಗನ್ನಾಥವಿಟ್ಠಲ ವೊಲಿದು ನಿರತಾ ॥ ೧೨ ॥ ಶ್ರೀ: ॥

## ೬೫. ರಾಗ ಪೂರ್ವಿ, ತ್ರಿಪುಟತಾಳ.

ಶೇಷದೇವಾ । ವಾರುಣೀಪತಿ ಪಾಹಿ ॥ ಪಲ್ಲ ॥ ಶೇಷದೇವ ತ್ರಯೀಷಾಘೋಷಣಮುಖ ಪರಿ । ತೋಷಿಸು ಯೆಮ್ಮಭಿಲಾಷೆಯ ಸಲಿಸಿ ॥ ಅನುಪಲ್ಲ ॥ ಭಜಿಸುವೆ ಸರ್ವದ ಸುಜನಾಭೀಷ್ಟದ । ತ್ರಿಜಗಾಧಾರಕ ಭುಜಗೋತ್ತಂಸಾ ॥ ೧ ॥ ಪುಣ್ಯಚರಿತ ಸುಶರಣ್ಯನೆ ಸುಬ್ರ । ಹ್ಮಣ್ಯದೇವ ಕಾರುಣ್ಯಮೂರುತಿ ॥ ೨ ॥ ಅಸಿತವಸನ ಹಲಮುಸಲಾಯುಧಧರ । ದ್ವಿಸಹಸ್ರೇಕ್ಷಣ ಸುಶರಣಪಾಲಾ ॥ ೩ ॥ ವಾರುಣಿಸುಮುಖ ಸರೋರುಹದಿನಕರ । ತೋರು ತವಾಂಘ್ರಿ ಮಹೋರಗರಾಜಾ ॥ ೪ ॥ ಪಾತಾಳಪ ಪುರುಹೂತನತ ಜಗ ॥ ನ್ನಾಥವಿಟ್ಠಲನ ಪ್ರೀತಿವಿಷಯನೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೬. ರಾಗ ಭೈರವಿ, ತ್ರಿಪುಟತಾಳ.

ಇಂದು ನೋಡಿದೆ ನಂದತೀರ್ಥಮು । ನೀಂದ್ರವಂದಿತಚರಣನಾ ॥ ॥ ಪಲ್ಲ ॥ ವಂದಿಸುವ ಭಕತರಿಗೆ ನಿತ್ಯಾ । ನಂದಫಲದ ಮುಕುಂದನಾ ॥ ॥ ಅನುಪಲ್ಲ ॥ ತಮನ ವೈರಿಯ ಮಂದರಾಧರ ಕಮಠರೂಪವ ಪೋತ್ರನಾ ॥ ಕಮಲಸಂಭವ ಭವನ ಕಶಿಪು । ದಮನವಾಮನ ಮೂರ್ತಿಯಾ ॥ ॥ ೧ ॥ ಭೂಮಿಪರ ಸಂಹರಿಸಿ ದಶರಥ । ರಾಮನಾಮದಿ ಮೆರದನಾ ॥ ಸೋಮಪಾಧಿಪಸುತಗೊಲಿದು ಸಂ । ಗ್ರಾಮದಲಿ ರಕ್ಷಿಸಿದನಾ ॥ ೨ ॥ ಬುದ್ಧರೂಪದಿ ತ್ರಿಪುರಸತಿಯರ । ಬುದ್ಧಿ ಭೇದವ ಮಾಡ್ದನಾ ॥ ಬುದ್ಧರಲಿ ಕಲಿಮುಖ್ಯಯವನರ । ಗೆದ್ದ ಗಾನವಿಲೋಲನಾ ॥ ೩ ॥ ದೇವಕೀವಸುದೇವತನಯನ । ದೇವಗಣ ಸಂಸೇವ್ಯನಾ ॥ ಈವಸುಂಧರೆಯೊಳಗೆ ಮಧ್ವಸ । ರೋವರದಲಾವಾಸನಾ ॥ ೪ ॥ ಪೋತವೇಷನ ವೀತಶೋಕನ । ಪೂತನಾದಿವಿಘಾತನಾ ॥ ಮಾತರಿಶ್ವಪ್ರಿಯಗುರು ಜಗ । ನ್ನಾಥವಿಟ್ಠಲರೇಯನಾ ॥ ೫ ॥ ಶ್ರೀಃ ॥

೬೭. ರಾಗ ಬಿಲಹರಿ, ಝಾಪುತಾಳ.

ರತುನ ದೊರಕಿತಲ್ಲಾ । ಯೆನಗೊಂದು । ರತುನ ದೊರಕಿತಲ್ಲಾ ॥ ಪಲ್ಲ ॥ ರತುನ ದೊರಕಿತು ಯೆನ್ನ ಜನ್ಮ ಪವಿತರವಾಯಿತು ಇಂದಿನ ದಿನಾ । ಯತನಗೈಯ್ಯುತ ಬರುತಲಿದೆ ಪ್ರ । ಯತನ ಮಾಡದೆ ವಿಜಯರಾಯ ರೆಂಬೋ ॥ ಅನುಪಲ್ಲ ॥ ಜ್ಞಾನವೆಂಬೋ ಪುತ್ಥಲಿ । ಕಂಬಿಯಲಿ । ಆಣಿ ಮುತ್ತಿನ ಭಕ್ತಿಲಿ । ಸುಕೃತಮಾಲಾ । ನಾನಾವಿಧಗಳಲ್ಲಿ । ಯೋಚಿಸು ತಿರೆ ॥ ಪ್ರಾಣಪದಕವೆಂಬ ಮಾಲೆನು । ಮಾನವಿಲ್ಲದೆ ಕೊರಳಿಗ್ಹಾಕುತ । ಗಾನದಿಂದಲಿ ಕುಣಿದು ಪಾಡಲು । ದೀನಜನರುದ್ಧಾರಗೈಯ್ಯುವ ॥ ೧ ॥ ಪಥದೀ ನಾ ಬರುತಿರಲು । ಥಳಥಳವೆಂದು । ಅತಿಕಾಂತಿಯು ಕಾಣಲು । ಬೆರಗಾಗುತ ಅತಿಚೋದ್ಯನ ಪಾಡಲು । ಸೇವಿಸುತಿರೆ ॥ ಸತತ ಕರ ಪಿಡಿ ದಾದರಿಸಿ ಮನೋ । ರಥವ ಪೂರೈಸುತಲಿ ಯೆನಗೆ ಸ । ನ್ಮತಿಯ ಪಾಲಿಸಿ ಮೋಕ್ಷಪಥವನೆ । ಅತಿಶಯದಿ ತೋರಿಸುತ ಪೊರೆಯುವ ॥ ೨ ॥ ಶೋ ಧಿಸಿ ಗ್ರಂಥಗಳ । ಸುಳಾದಿಯ । ಮೋದದಿಂದಲಿ ಬಹಳ । ಕವಿತಾ ಮಾಡಿ ಸಾಧುಜನಕೆ ಸುಕಾಲಾ । ಆನಂದವನಿತ್ತು ॥ ವಾದಿಯನು ತಾ ವದೆದು ಕಾಲಿಲಿ । ಮಾಧವ ಜಗನ್ನಾಥವಿಠಲನ । ಪಾದಕಮಲಕೆ ಮಧು ಪನಂದದಿ । ಸಾದರದಿ ತೋರುತಲಿ ಮೆರೆಯುವ ॥ ೩ ॥ ಶ್ರೀಃ ॥

೬೮. ರಾಗ ದೇಶಿ, ಅಟತಾಳ.

ರೋಗಹರನೇ ಕೃಪಾಸಾಗರ ಶ್ರೀಗುರು । ರಾಘವೇಂದ್ರ ಪರಿಪಾ ಲಿಸೋ ॥ ಪಲ್ಲ ॥ ಸಂತತ ದುರ್ವಾದಿಧ್ವಾಂತದಿವಾಕರ । ಸಂತವಿನುತ ಮಾತ ಲಾಲಿಸೋ ॥ ೧ ॥ ಪಾವನಗಾತ್ರ ಸುದೇವವರನೆ ತವ । ಸೇವಕ ಜನರೊಳಗಾಡಿಸೋ ॥ ೨ ॥ ಘನ್ನಮಹಿಮ ಜಗನ್ನಾಥವಿಠಲಪ್ರಿಯ । ನಿನ್ನಾರಾಧನೆ ಮಾಡಿಸೋ ॥ ೩ ॥ ಶ್ರೀಃ ॥

೬೯. ರಾಗ ಧನ್ಯಾಸಿ, ಅಟತಾಳ.

ಕರುಣಿಗಳೊಳಗೆಣೆಗಾಣೆನೋ ನಿನಗೆ ಸ । ದ್ಗುರುವರ ರಾಘವೇಂದ್ರಾ ॥ ॥ ಪಲ್ಲ ॥ ಚರಣಕಮಲಗಳ ಮೊರೆಹೊಕ್ಕ ಭಕತರ । ಹರಿಕೆಯ ನಿರುತ

ದೀವೆ ನೀ ಕಾವೇ ॥ ಅನುಪಲ್ಲ ॥ ರಾಘವೇಂದ್ರಗುರುವೇ ಗತಿಯೆಂದ ವನುರಾಗದಿಂದಲಿ ಭಜಿಪಾ ॥ ಭಾಗವತರ ದುರಿತೌಘಗಳಳಿದು ಚ । ನ್ನಾಗಿ ಸಂತೈಸುವಿ ನೀ ಸನ್ಯಾಸೀ ॥ ೧ ॥ ಸುಧೀಂದ್ರಯತಿಕರಪದುಮ ಸಂಭವ ಮಧು । ವಧಪದಾಂಬುಜಮಧುಪಾ ॥ ತ್ರಿದಶಭೂರುಹದಂತೆ ಬುಧಜನರಿಚ್ಛಿತ । ವೊದಗಿ ಪಾಲಿಸಿ ಪೊರೆವೇ ಮದ್ಗುರುವೆ ॥ ೨ ॥ ಕುಧ ರದೇವನ ದಿವ್ಯ ರದನದಿ ಜನಿಸಿದ । ನದಿಯ ತೀರದಿ ಶೋಭಿಪ ॥ ಸದ ಮಲಘನಮಂತ್ರಸದನನಿಲಯ ಜಿತ । ಮದನ ಶ್ರೀಜಗನ್ನಾಥವಿಠಲನ ದೂತಾ ॥ ೩ ॥ ಶ್ರೀಃ ॥

## ೭೦. ರಾಗ ಭೈರವಿ, ಅಟತಾಳ.

ಅಂಬಾತನಯ । ಹೇರಂಬ ॥ ಪಲ್ಲ ॥ ಅಂಬಾತನಯ ಕರು । ಣಾಂ ಬುಧೇ ತವ ಚರ । ಣಾಂಬುಜಕೆರಗುವೆ ॥ ಅನುಪಲ್ಲ ॥ ದಶನಶೋಭಿತ ಪಾಶಾಂಕುಶಪಾಣೇ ಕರಿಮುಖ । ಅಸಮಚಾರುದೇಷ್ಣ ಕುಸುಮನಾಭನ ಮಿತ್ರ ॥ ೧ ॥ ವೃಂದಾರಕವೃಂದವಂದಿತಚರಣಾರ । ವಿಂದಯುಗಳ ದಯ ದಿಂದ ತೋರೆನಗೆ ॥ ೨ ॥ ಯೂಥಪಾವನ ಪ್ರದ್ಯೋತಸನ್ನಿಭ ಜಗ । ನ್ನಾಥವಿಠಲನ ಸಂಪ್ರೀತಿ ವಿಷಯ ಜಗದ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೧. ರಾಗ ಕಾಂಬೋಧಿ, ಝಂಪೆತಾಳ.

ಪಂಪಾಪುರ ನಿವಾಸ ಪ್ರಮಥರೇಶ ॥ ಪಲ್ಲ ॥ ತ್ವಂ ಪಾಹಿ ಪಾಹಿ ತ್ರಿಪು ರಾರಿ ತ್ರಿನೇತ್ರಾ ॥ ಅನುಪಲ್ಲ ॥ ಕೈಲಾಸಸದ್ಮ ಚಿತಿಚೈಲಭೂಷಣ ಮನೋ । ವ್ಯೈಲಿಗಿಯ ಪರಿಹರಿಸು ನೀಲಕಂಠಾ ॥ ಕಾಲಕಾಲಗಳಲ್ಲಿ ಕಾಲನಿಯಾ ಮಕನ । ಲೀಲೆಗಳ ತುತಿಪುದಕೆ ನಾಲಿಗೆಗೆ ಕೊಡು ಶಕ್ತಿ ॥ ೧ ॥ ಪಾರ್ವ ತೀರಮಣ ನೀ ಮೋಹಶಾಸ್ತ್ರವ ರಚಿಸಿ । ಶಾರ್ವರೀಚರರ ಮೋಹಿಸಿದಿ ಹಿಂದೆ ॥ ದೂರ್ವಾಸ ಶುಕ ವ್ಯಾಧ ಜೈಗೀಷರೂಪದಲಿ । ಇರ್ವರಿಯಪರಿ ಯುದಲಿ ಹರಿಯ ಮೆಚ್ಚಿಸಿದೆ ॥ ೨ ॥ ಸುರನದೀಧರ ನಿನ್ನ ಚರಿತೆಗಳ ವರ್ಣಿಸಲು । ಸುರಗಣ ಸುಮನಸಾದ್ಯರಿಗೆ ಅಸದಳ ॥ ಸ್ಮರನ ಪಿತ

ಶ್ರೀಜಗನ್ನಾಥವಿಠಲನ್ನ ಸಂ । ಸ್ಮರಣೆಯನೆ ಇತ್ತು ಉದ್ಧರಿಸೊ ನೀ ದಯದೀ ॥ ೩ ॥ ಶ್ರೀಃ ॥

೭೨. ರಾಗ ಮಧ್ಯಮಾವತಿ, ಆದಿತಾಳ.

ಪ್ರಾಣದೇವ ನೀನಲ್ಲದೆ ಕಾಯ್ವರ । ಕಾಣೆ ಲೋಕದೊಳಗೆ ॥ ಮುಖ್ಯ ॥ ॥ ಪಲ್ಲ ॥ ವಾಸವ ಕುಲಿಶದಿ ಘಾಸಿಸೆ ಜೀವರ । ಶ್ವಾಸ ನಿರೋಧಿಸಿದೆ ॥ ಆ ಸಮಯದಿ ಕಮಲಾಸನ ಪೇಳಲು । ನೀ ಸಲಹಿದೆ ಜಗವ ॥ ಮುಖ್ಯ ॥ ॥ ೧ ॥ ಅಂಗದಪ್ರಮುಖಪ್ಲವಂಗರು ರಾಮನ । ಅಂಗನೆಯನು ಪುಡುಕೆ ॥ ತಿಂಗಳು ಮೀರಲು ಕಂಗೆಡೆ ಕಪಿಗಳ । ಜಂಗುಳಿ ಪಾಲಿಸಿದೆ ॥ ಮುಖ್ಯ ॥ ॥ ೨ ॥ ಪಾವಿನ ಪಾಶದಿ ರಾವಣಿ ನೀಲ ಸು । ಗ್ರೀವಮುಖ್ಯರ ಬಿಗಿಯೇ ॥ ಸಾವಿರದೈವತ್ತು ಗಾವದದಲ್ಲಿಹ ಸಂ । ಜೀವನ ಜಗಸಾ ತಂದೇ ॥ ಮುಖ್ಯ ॥ ॥ ೩ ॥ ಪಂಸರ ನೀನಿರೆ ಹರಿ ತಾನಿಪ್ಪನು । ಇ [illegible] ಶಾನಿರನು ॥ ಕರಣ ನಿಯಾಮಕ ಸುರರ ಗುರುವೆ ನೀ । ಕರುಣಿಸೋ [illegible]ಣಿಸುವಾ ॥ ೪ ॥ ಭೂತೇಂದ್ರಿಯದಧಿನಾಥ ನಿಯಾಮಕ । ಆತ್ಮಜಸಹರನಾ ॥ ತಾತನೆನಿಪ ಜಗನ್ನಾಥವಿಟ್ಠಲನ । ಪ್ರೀತಿಪಾತ್ರನಾದೆ ॥ ಮುಖ್ಯ ॥ ೫ ॥ ಶ್ರೀಃ ॥

೭೩. ರಾಗ ಧನ್ಯಾಸಿ, ಆದಿತಾಳ.

ಯಾತರ ಭಯ ಶ್ರೀನಾಥನ ಪರಮ ಸು । ಪ್ರೀತಿಯ ಪಡದವಗೆ ॥ ॥ ಪಲ್ಲ ॥ ಕಾತರಪಡದಲೆ ಪಾತಕಹರ ವಿಧಿ । ತಾತನೆ ನಿಜಸುಖದಾತನೆಂದರಿತವಗ್ಯಾ ॥ ಅನುಪಲ್ಲ ॥ ಬಂಧುಜನರು ತನಗೊಂದಿಸಿ ನುಡಿಯಲು ಬಂದ ಭಾಗ್ಯವೇನೋ । ಹಿಂದೆ ಮುಂದೆ ತನ್ನ ನಿಂದಿಸಿ ನುಡಿಯಲು ಕುಂದಾದದ್ದೇನೋ ॥ ಮಂದರಧರ ಗೋವಿಂದನ ಮಾನಸ । ಮಂದಿರದಲಿ ತಂದಿಟ್ಟಿರುವವಗಿನ್ಯಾ ॥ ೧ ॥ ದುಸುಮುಸುಗುಟ್ಟುವ ಸತಿಸುತರಿಂದಲಿ ಹಸಗೆಟ್ಟದ್ದೇನೋ । ಅಶನಾಚ್ಛಾದನ ತರಲಿಲ್ಲವೆಂದು ವ್ಯಸನಪಟ್ಟರೇನೋ ॥ ಕುಸುಮನಾಭ ಸುಮನಸರೊಂದಿತಪದ । ವಸುದೇವನ ಸುತನೊಶದಲ್ಲಿರುವವಗ್ಯಾ ॥ ೨ ॥ ಘಾಸಿಯಿಂದಲಾಯಾಸಪಡುತ ಆವಾಸದೊಳಿಪ್ಪೇನೋ । ಕಾಶಿಕಂಚಿಕಾಳಹಸ್ತಿ ಮೊದಲಪರ । ದೇಶ ತಿರು[illegible]

ಲೇನೋ ॥ ಈಶಾಧೀಶ ಜಗನ್ನಾಥವಿಟ್ಠಲನ । ದಾಸನೆಂದು ಸಂತೋಷ ದಲ್ಲಿರುವವಗ್ಯಾ ॥ ೩ ॥ ಶ್ರೀಃ ॥

### ೭೪. ರಾಗ ಕಮಾಚಿ, ಆದಿತಾಳ.

ನಾರದಪ್ರಿಯ ಕೃಷ್ಣ ನರಾಕಾರ । ಜಾರಚೋರ ಶೂರಧೀರ ॥ ನಾ ॥ ಪಲ್ಲ ॥ ಘೋರತರವಾದ ಸಂಸಾರ ಸುಖದುಃಖಗಳ । ವಿಾರಿ ಪೊರೆ ವಂಥ ಬಲುಭಾರಕರ್ತನೇ ॥ ಧಾರುಣಿಯ ಮೇಲಿರುವ ಸೂರಿಜನರನು ಸದಾ । ಸಾರಸಾಕ್ಷ ಬಿಡದಲೆ ಪಾರಗಾಣಿಸುವ ದೇವ ॥ ನಾ ॥ ೧ ॥ ಮಂದಮತಿಯನಳದು ಚಂದದಿ ಸುಮಾರ್ಗವನ್ನು । ನಂದದಿಂದ ತೋರ್ಪ ಮುಚುಕುಂದವಂದ್ಯನೆ ॥ ಎಂದಿಗೆಮ್ಮ ಗತಿಯೆಂದು ಹೊಂದಿ ಬೇಡ್ವ ಭಕತರ । ನಂದಿಸ್ಯಾಸುರ ಭವಬಂಧನ ಬಿಡಿಸುವ ದೇವ ॥ ನಾ ॥ ೨ ॥ ದಾಶರಥೆ ಯೆನ್ನ ಕ್ಲೇ[illegible]ವಮಾಡು ದಯದಿ ದಿ। ನೇಶಶತಕೋಟಿಭಾಸ ಸಂಕಾಶ ಶ್ರೀಶ ॥ ವಾ[illegible]ಾದಿವಂದ್ಯ ಜಗನ್ನಾಥವಿಠಲನೆ ಪ್ರೀಯ । ದಾಸ ರಭಿಲಾಷೆಗಳ ಲೇಸುಗಯ್ಯೋ ವಾಸುದೇವ ॥ ನಾ ॥ ೩ ॥ ಶ್ರೀಃ ॥

### ೭೫. ರಾಗ ಪೂರ್ವಿ, ಆದಿತಾಳ.

ವಾದಿರಾಜ ॥ ವಾದಿರಾಜ ಪ್ರತಿವಾದಿಗಜೇಂದ್ರ ಮೃ । ಗಾಧಿರಾಜ ವಿಬುಧೋದಿತಚಂದ್ರ ॥ ವಾ ॥ ಪಲ್ಲ ॥ ವಾದಿರಾಜಗುರು ನೀ ದಯಮಾ ಡದೆ । ಈ ದುರಿತವ ಕಳೆದಾದರಿಪರ್ಯಾರು ॥ ವಾ ॥ ೧ ॥ ಯುಮಿವ ರ್ಯನೆ ತ್ರಿವಿಕ್ರಮನ ರಥೋತ್ಸವ । ಸಮಯವಿದೆಂದುತ್ಕ್ರಮಣನಿಲ್ಲಿಸಿದೆ ॥ ವಾ ॥ ೨ ॥ ಬಂದು ಕರಿಯೆ ಪುರಂದರನಾಳ್ಗಳ । ಹಿಂದಟ್ಟಿದ ಕರ್ಮಂದಿ ಗಳರಸೆ ॥ ವಾ ॥ ೩ ॥ ಅರ್ಥಿಗಳಿಗೆ ಪರಮಾರ್ಥವ ಕೊಡುವ ಸು । ತೀರ್ಥ ಪ್ರಬಂಧವ ಕೀರ್ತನೆಗಯ್ದೆ ॥ ವಾ ॥ ೪ ॥ ಭಾಗೀರಥಿಯಂತ್ಯೋಗಿವರ ಶ್ರೀ । ವಾಗೀಶರ ಕರಯುಗ ಸಂಭವನೇ ॥ ವಾ ॥ ೫ ॥ ಗರಮಿಶ್ರಿತ ನರ ಹರಿನೈವೇದ್ಯವ । ಅರಿತು ಪೇಳೆ ಉಂಡರಗಿಸಿಕೊಂಡೆ ॥ ವಾ ॥ ೬ ॥ ಯಲರುಣಿ ಭಯಕಂಜಿಲಿ ನಿಮ್ಮಾಸನ । ಕೆಳಗಿರೆ ಕಂಡದನುಳುಹಿದ ಕರುಣೀ ॥ ವಾ ॥ ೭ ॥ ಹಯವದನನ ಪದದ್ವಯಭಜಕಾಗ್ರಣಿ । ದಯದಿ

ವಿಪ್ರನಿಗೆ ನಯನವನಿತ್ತೆ ॥ ವಾ ॥ ೮ ॥ ಪೂತೋತ್ತಮ ಜಗನ್ನಾಥವಿಟ್ಠಲನ। ಖ್ಯಾತಿಯ ತುತಿಸುವಾನಾಥಜನಾಪ್ತ ॥ ವಾದಿರಾಜ ॥ ೯ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೬. ರಾಗ ಪಂತುವರಾಳಿ, ರೂಪಕತಾಳ.

ವ್ಯರ್ಥ ಕಳವರೇನೋ। ಕಾಲವ। ಯೇ ಪ್ರಾಣಿಸಿ ನೀನು ॥ ಪಲ್ಲ ॥ ಪಾರ್ಥಸಖನ ವಿಮಲವಾರ್ತೆ। ಕೀರ್ತಿಸದೆ ಕುವಾರ್ತೆಯಿಂದ ॥ ಅನುಪಲ್ಲ ॥ ನೇಸರನುದಯಿಸದ ಮುನ್ನ। ಶ್ರೀಶನ ಗುಣಕರ್ಮನಾಮ ॥ ಬೇಸರದಲೆ ಸ್ಮರಿಸುವೆ ನೀ। ಏಸು ಹರಟೆಗಳನು ಹರಟೆ ॥ ೧ ॥ ಪವನಮತವಲಂಬಿಸಿದ। ಸ್ಥವಿರ ಕವಿಗಳಿಂದ ಕಥಾ ॥ ಶ್ರವಣರಸವ ಕಿವಿಗಳಿಂದ। ಸವಿದು ಸುಖಿಸಿ ಪ್ರವರನಾಗದೆ ॥ ೨ ॥ ಕ್ಷಿತಿಜಲಾಗ್ನಿವಾಯು ಖ। ಮತುಳಬುಧ್ಯಹಂಕಾರಗಳು ॥ ಕೃತಿರಮಣನ ವಿಮಲ ಭಿನ್ನ। ಪ್ರತಿಮೆಯೆಂದು ಭಜಿಸದಲೆ ॥ ೩ ॥ ಶ್ರೀಪಯೋಜಪೀಠ ಶೈಲ। ಚಾಪ ಗೋಪಮುಖರು ದ್ವಿತೀಯ ॥ ರೂಪರೆಂದು ಹರಿಗೆ ನೀ ಪ। ದೇಪದೇ ನಮಸ್ಕರಿಸದೆ ॥ ೪ ॥ ಪುತ್ರ ಜನನಿ ಜನಕ ವಿತ್ತ। ಕರ್ತೃ ಜಗನ್ನಾಥವಿಠಲ ॥ ಪಾತ್ರಕರ್ಮಕರಣ ಕ್ರಿಯಾ। ಭೋಕ್ತೃ ಮಿತ್ರನೆಂದರಿಯದೆ ॥ ೫ ॥ ಶ್ರೀಃ ॥

## ೭೭. ರಾಗ ದರ್ಬಾರ್, ಅಟತಾಳ.

ರಕ್ಷಿಸೋ ಶ್ರೀಶಾ। ಶ್ರೀನಿವಾಸಾ। ರಕ್ಷಿಸೋ ಶ್ರೀಶಾ ॥ ಪಲ್ಲ ॥ ರಕ್ಷಿಸೆನ್ನ ಪದ್ಮಾಕ್ಷ ತ್ರಿಜಗ। ಧ್ಯಕ್ಷ ಖಳಜನಶಿಕ್ಷ ಪಾಂಡವ। ಪಕ್ಷ ಕರುಣಕಟಾಕ್ಷದಲಿ ನಿ। ರೀಕ್ಷಿಸುತ ಪೊರೆ ಪಕ್ಷಿವಾಹನ ॥ ಅನುಪಲ್ಲ ॥ ಕೊಂಚಮತಿಯಲಿ। ಕುಜನರ ಸೇರಿ। ಸಂಚರಿಸುತಲೀ। ದೀನನಾದೆ ॥ ಪಂಚಶರಸ್ಮರ ವಂಚಿಸುತ ಬಿಡೆ। ಚಂಚಲಾಕ್ಷೆರ ಸಂಚುನೋಟದ। ಮಿಂಚಿಗೆನಮನ ಚಂಚಲಾಗುತೆ। ವಂಚಕೆಮನಂಚಿಕೆಗೆ ಸಿಲುಕಿದೆ ॥ ೧ ॥ ಕಿಟ್ಟಗಟ್ಟಿದಾ। ಕಬ್ಬಿಣದಂತೆ। ಕೆಟ್ಟ ಕಿಲ್ಬಿಷದ। ಕೂಪದಿ ಬಿದ್ದು ॥ ಧಿಟ್ಟನಿನ್ನಯ ಗುಟ್ಟು ತಿಳಿಯದೆ। ಪೊಟ್ಟೆಗೋಸುಗ ಕೆಟ್ಟ ಕುಜನರ। ಘಟ್ಟಿಸಾ

ಕಾಲ್ಗಟ್ಟಿ ಬಹುಶ್ರಮ । ಪಟ್ಟ ಭವದಿ ಕಂಗೆಟ್ಟೆ ಪ್ರತಿದಿನ ॥ ೨ ॥ ಶ್ರೀಕವು ಲೇಶಾ । ಹೃತ್ಸದ್ಮಾದ್ಯ । ನೇಕಪ್ರಕಾಶಾ । ಬೇಗನೆ ಬಂದು ॥ ಯಾಕೆ ತಡ ಯೆನ್ನ ವಾಕುಲಾಲಿಸಿ । ಶೋಕದಿಯಿಂದಲಿ ನೀ ಕರವ ಪಿಡಿ । ದಾಕು ಚೇಲನ ಸಾಕಿದಾಪರಿ । ಶ್ರೀಕರನೆ ಜಗನ್ನಾಥವಿಠಲ ॥ ೪ ॥ ಶ್ರೀ ॥

೭೮. ರಾಗ ವರಾಳಿ, ಅಟತಾಳ.

ಮಧ್ವಾಂತರ್ಗತ ವೇದವ್ಯಾಸಾ । ಮಮ । ಹೃದ್ವಸರುಹಸನ್ನಿವಾಸಾ ॥ ॥ ಪಲ್ಲ ॥ ಸದ್ಬುದ್ಧಿ ಕೊಡು ಶ್ರೀಕೃಷ್ಣದ್ವೈಪಾಯನ ಚಿದ । ಚಿದ್ವಿಲಕ್ಷಣ ತ್ವತ್ಪಾದದ್ವಯಾಬ್ಜವ ತೋರೋ ॥ ಅನುಪಲ್ಲ ॥ ಬಾದರಾಯಣ ಬಹುರೂಪಾ । ಸನ । ಕಾದಿಸನ್ನುತ ಧರ್ಮಯೂಪಾ ॥ ವೇದೋದ್ಧಾರನಾದನಾದಿಕರ್ತ ಪೂರ್ಣ । ಬೋಧ ಸದ್ಗುರುವರರಾಧಿತಪದಯುಗ ॥ ಮೇದಿನಿಯೊಳಾನೋರ್ವ ಪರ । ಮಾಧವಮಧವ ಕೈಪಿಡಿಯೊ ಪೂರ್ಣವು । ಹೋದಧೇ ಕಮನೀಯಕಾಯಪ್ರ । ಬೋಧಮುದ್ರಾಭಯಕರಾಂಬುಜ ॥ ೧ ॥ ಹರಿತೋಪಲಾಭಶರೀರ । ಪರಾ । ಶರಮುನಿವರಸುಕುಮಾರ ॥ ಪರಮಪುರುಷ ಕಾರ್ತಸ್ವರಗರ್ಭ ಪ್ರಮುಖ ನಿ । ರ್ಜರ ಗಣಮುನಿನುತವರಪಾದ ಪಂಕಜ ॥ ಕುರುಕುಲದಿ ಧೃತರಾಷ್ಟ್ರಪಾಂಡುವಿ । ದುರರ ಪಡದೈವರಿಗೊಲಿದು ಸಂ । ಹರಿಸಿ ದುರ್ಯೋಧನನ ಭಾರತ । ವಿರಚಿಸಿದ ಸುಂದರ ಕವೀಂದ್ರ ॥ ೨ ॥ ಜಾತರೂಪಜಟಾಜೂಟ । ಶ್ರೀನಿ । ಕೇತನ ತಿಲಕಲಲಾಟ ॥ ಪೀತಕೃಷ್ಣಾಜಿನ ಶ್ವೇತಶ್ರೀಯಜ್ಞೋಪ । ವೀತ ಮೇಖಲದಂಡಾನ್ವಿತಕಮಂಡಲ ॥ ಭೂತಭಾವನ ಭೂತಕೃತ್ಸ । ದ್ಭೂತಿದಾಯಕ ಶ್ರೀಜಗ । ನ್ನಾಥವಿಠಲನೆ ನಿನ್ನ ಮಹಿಮೆಯ ನಾ ತುತಿಸಬಲ್ಲೆನೆ ಸುಖಾತ್ಮಾ ॥ ೩ ॥

X ೭೯. ರಾಗ ಶಂಕರಾಭರಣ, ಅಟತಾಳ.

ಕೃಷ್ಣರಾಯನೇ ನಿನ್ನ ಕೃತ್ಯಗಳಿಲ್ಲ । ಸೃಷ್ಟಿಯೊಳಗೆ ನಾನು ಬೇರಲ್ಲಾ ॥ ॥ ಪಲ್ಲ ॥ ಶಿಷ್ಟರೊಳಗೆ ಇಟ್ಟು ಚಿರಕಾಲದಲ್ಲೆನ್ನ । ಕಷ್ಟಬಿಡಿಸದೆ ಸುಮ್ಮನಿದ್ದಿಯಾ ಸ್ವಾಮಿ ॥ ಅನುಪಲ್ಲ ॥ ಜನನ ಮರಣ ಶೂನ್ಯನೆನಿಸಿಕೊಂಡು

ಗೋಪಿ । ತನಯನಾಗಿದ್ದದ್ದು ಹೇಳಲ್ಯಾ ॥ ಸನಕಾದಿ ಸೇವ್ಯಪೂಜ್ಯನೆ ತುರುಗಳ ಹಿಂಡು । ವನದಲ್ಲಿ ಕಾಯ್ದದ್ದು ಹೇಳಲ್ಯಾ । ನಾನು ॥ ೧ ॥ ದನುಜಭಂಜನನಾದ ಘನಮಹಿಮನೆ ಮಾಗ । ಧನಿಗಂಜಿ ಓಡಿದ್ದು ಹೇಳಲ್ಯಾ ॥ ಎಣೆಯಿಲ್ಲದ ಶೂರಾ ರಣದೊಳು ಪಾರ್ಥಗೆ । ಅನುಗನಾಗಿದ್ದದ್ದು ಹೇಳಲ್ಯಾ । ನಾನು ॥ ೨ ॥ ಸತತ ತೃಪ್ತನಾಗಿ ಕ್ಷಿತಿಯೊಳು ಬೆಣ್ಣೆಯ । ಮಿತವಾಗಿ ಕದ್ದದ್ದು ಹೇಳಲ್ಯಾ ॥ ಕೃತಿದೇವಿರಮಣನೆ ಅತಿ ಪ್ರೀತಿಯಲಿ ಗೋಪ । ಸತಿಯರ ಕೂಡಿದ್ದು ಹೇಳಲ್ಯಾ । ನಾನು ॥ ೩ ॥ ಶ್ರುತಿತತಿಗಳಭೇದ್ಯ ಪ್ರತಿಯಿಲ್ಲದ ದೇವ । ಸತಿಗೊಶನಾದದ್ದು ಹೇಳಲ್ಯಾ ॥ ಶತಕ್ರತುವಿಧಿವಂದ್ಯ ಸುತರಾಪೇಕ್ಷಿಸಿ ಭೂತ । ಪತಿಯನ್ನು ಬೇಡಿದ್ದು ಹೇಳಲ್ಯಾ । ನಾನು ॥ ೪ ॥ ಭೂತಳದೊಳು ದೇವತೆಗಳೊಡನೆ ಇಂಥ । ರೀತಿಲಿ ಚರಿಸಿದ್ದು ಹೇಳಲ್ಯಾ ॥ ಭೀತಿರಹಿತ ಜಗನ್ನಾಥವಿಟ್ಠಲನೆ ಅ । ದ್ಭುತಮಹಿಮನೆಂದು ಹೇಳಲ್ಯಾ । ನಾನು ॥ ೫ ॥ ಶ್ರೀಃ ॥

## ೬೦. ರಾಗ ನಾದನಾಮಕ್ರಿಯೆ, ತ್ರಿಪುಟತಾಳ.

ಪಾಲಿಸೆನ್ನ । ಗೋ । ಪಾಲಕೃಷ್ಣ ॥ ಪಲ್ಲ ॥ ಪಾಲಿಸೆನ್ನ ದಧಿಪಾಲ ಮುಖರ ಗೋ । ಪಾಲ ಬಾಲ ಕೃಪಾಲಯ ಹರಿಯೆ ॥ ಅನುಪಲ್ಲ ॥ ಅಂಡಜಾಧಿಪ ಪ್ರಚಂಡಪೀಠ ಕೋ । ದಂಡಪಾಣಿ ಬ್ರಹ್ಮಾಂಡನಾಯಕ ॥ ೧ ॥ ಪುಂಡರೀಕಭವರುಂಡಮಾಲಿ ಮೇ । ಷಾಂಡ ಪ್ರಮುಖ ಸುರಕಾಂಡಮಂಡನಾ ॥ ೨ ॥ ಗೋಪಗೋಪೀಗೋಪಾಲ ವೃಷ್ಣಿಕುಲ । ದೀಪ ಶ್ರೀಪ ಶಿವಚಾಪಭಂಜನಾ ॥ ೩ ॥ ವ್ಯಾಪ್ತ ಗೋಪ್ತ ಜಗದಾಪ್ತ ದೋಷಸಿ । ಲಿಪ್ತಪ್ರಾಪ್ತಗತಸುಪ್ತ ಸುಷುಪ್ತಾ ॥ ೪ ॥ ಅಧ್ವರೇಶ ಲೋಕೋದ್ಧರಪಾಣಿ ಸ । ರಿದ್ವರಪಿತ ಗುರುಮಧ್ವವಲ್ಲಭಾ ॥ ೫ ॥ ವೇದ ವೇದ್ಯ ಬ್ರಹ್ಮಾದಿವಂದ್ಯ ಸುಖ । ಬೋಧಪೂರ್ಣ ಬ್ರಹ್ಮೋದನ ಭೋಕ್ತಾ ॥ ೬ ॥ ಪೂತವೇಷಧರ ಪೂತನಾರಿ ಪುರು । ಹೂತವಂದ್ಯ ಜಗನ್ನಾಥವಿಟ್ಠಲಾ ॥ ೭ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೮೧. ರಾಗ ಕಾಂಬೋಧಿ, ಝಂಪೆತಾಳ.

ಸರ್ವಾಂತರ್ಯಾಮಿ ನೀ ಸಲಹೋ ಯೆನ್ನ ॥ ಪಲ್ಲ ॥ ದುರ್ವಾರ್ತೆ ಕೇಳಿ ಮನಬರಿದೆ ಚಿಂತಿಸುತಿದೆ ॥ ಅನುಪಲ್ಲ ॥ ಜೀವಂಗೆ ಗುಣಕಾಲ ಕರ್ಮ ಪ್ರಕೃತಿಯು ನಿಜ ಸ್ವ । ಭಾವಗಳನನುಸರಿಸಿ ಸುಖದುಃಖವಾ ॥ ಈವ ಧೊರೆ ನೀನಲ್ಲದಿನ್ನುಂಟೆ ಜಗಕೆ ಮ । ತ್ತಾವನ್ಯೆ ಭಕ್ತರನು ಕಾಪಾಡುವ ದಾತಾ ॥ ೧ ॥ ಸತ್ಯಸಂಕಲ್ಪ ನೀನೆಂಬುದೆಂದಿಗು ಸತ್ಯ । ಭೃತ್ಯವತ್ಸಲನೆಂಬೋ ಬಿರುದು ನಿನ್ನದು ॥ ದತ್ತಾತ್ರೂಪನೆ ನಿನ್ನ ಸ್ಮರಣೆಮಾತ್ರದಲಿ ಅಪ । ಮೃತ್ಯು ಪರಿಹರವಹುದು ಸಂದೇಹವಿಲ್ಲಿದಕೇ ॥ ೨ ॥ ಶ್ರೀಪತೇ ಯೆನ್ನ ವಿಜ್ಞಾಪನವ ಕೈಕೊಂಡು । ಪಾಪಿಜನರಿಂದ ಬಂದಾಪತ್ತನು ॥ ನೀಪರಿಹರಿಸಿ ಸಲಹೊ ದ್ರೌಪದಿವರದ । ಕೃಪಾಸಮುದ್ರ ಜಗನ್ನಾಥ ವಿಟ್ಠಲ ಸ್ವಾಮೀ ॥ ೩ ॥ ಶ್ರೀಃ ॥

೮೨. ರಾಗ ಕಾಂಬೋಧಿ, ಝಂಪೆತಾಳ.

ಇದು ನಿನಗೆ ಧರ್ಮವೇ ಇಂದಿರೇಶಾ । ಬದಿಗ ನೀನಾಗಿದ್ದು ಭೀತಿಪಡಿಸುವದು ॥ ಪಲ್ಲ ॥ ನಿನ್ನ ಗುಣಗಳ ತುತಿಸಿ ನಿನ್ನನೇ ಹಾರೈಸಿ । ನಿನ್ನವರ ಪ್ರೀತಿಯನು ಸಂಪಾದಿಸೀ ॥ ಅನ್ಯರನ ಲೆಕ್ಕಿಸದೆ ಚೆನ್ನಾಗಿ ಬಾಳುವ । ಮಾನವನ ಈಪರಿಯು ಬನ್ನಬಡಿಸುವದೂ ॥ ೧ ॥ ದುರುಳನಲ್ಲವೊ ನಿನ್ನ ಚರಣ ಸೇವಕರವನ । ಪರಿಪಾಲಿಪುದು ನಿನ್ನ ಪರಮ ಧರ್ಮ ॥ ಗುರುಗಳಂತರ್ಯಾಮಿ ಕರಮುಗಿದು ಬಿನ್ನೈಪೆ । ಶರಣರಕ್ಷಕನೆಂಬೊ ಬಿರಿದು ಸುಳ್ಳಾಗುತಿದೆ ॥ ೨ ॥ ಶೋಕನಾಶನ ವಿಗತಶೋಕನೆಂಬೋ ನಾಮ । ನಾ ಕೇಳಿ ಮರೆಹೊಕ್ಕೆ ಲೋಕಬಂಧೂ ॥ ನಿರಾಕರಿಸದೆಮ್ಮ ನೀ ಸಾಕಬೇಕನುದಿನವು । ವಾಕು ಮನ್ನಿಪುದು ಲೋಕೈಕ ರಕ್ಷಾಮಣಿಯೇ ॥ ೩ ॥ ಗುಣವೆ ನಿನಗಿದು ಬರಿದೆ ದಣಿಸುವದು ಶರಣರನು । ಪ್ರಣತಾರ್ತಿಹರ ವಿಭೀಷಣಪಾಲಕ ॥ ಕ್ಷಣಕನಂತಪರಾಧವೆಣಿಸುವರೆ ಕಡೆಯುಂಟೆ । ಮಣಿದು ಬಿನ್ನಹಮಾಳ್ಪೆ ದನುಜದಲ್ಲಣನೇ ॥ ೪ ॥ ನಮೊ ನಮೋ ಬ್ರಹ್ಮಣ್ಯ ನಮೋ ದೇವರ ದೇವ । ನಮೊ ನಮೋ ಧನ್ವಂತ್ರಿ ದುರಿತ

ಹಂತ್ರೀ ॥ ನಮೊ ನಮೋ ಕಾರುಣ್ಯಶೀಲ ಸಜ್ಜನಪಾಲ । ನಮೊ ನಮೋ ಜಗನ್ನಾಥವಿಠಲ ವಿಖ್ಯಾತಾ ॥ ೫ ॥ ಶ್ರೀಃ ॥

## ೬೩. ರಾಗ ತೋಡಿ, ರೂಪಕತಾಳ.

ಪೊಂದಿ ಬದುಕಿರೋ । ರಾಘ । ವೇಂದ್ರರಾಯರ ॥ ಕುಂದದೆಮ್ಮನು । ಕರು ಣ । ದಿಂದ ಪೊರೆವರ ॥ ಪಲ್ಲ ॥ ನಂಬಿ ತುತಿಸುವ । ಜನಕ । ದಂಬಕಿಷ್ಟವ ॥ ತುಂಬಿ ಕೊಡುವರು । ಅನ್ಯ । ಹಂಬಲೀಯರು ॥ ೧ ॥ ಅಲವಬೋಧರಾ । ಸುಮತ । ಜಲಧಿಚಂದಿರಾ ॥ ಒಲಿದು ಭಕ್ತರ । ಕಾಯ್ವ । ಸುಲಭಸುಂದರಾ ॥ ॥ ೨ ॥ ಗುರು ಸುಧೀಂದ್ರರಾ । ವಿಮಲ । ಕರಜರೆನಿಸರಾ ॥ ಸ್ಮರಿಸಿ ಸುರುಚಿರಾ । ವಿಮಲ । ಚರಣಪುಷ್ಕರಾ ॥ ೩ ॥ ಫಾಲಲೋಚನಾ । ವಿನುತ । ಮೂಲರಾ ಮನಾ ॥ ಶೀಲಸದ್ಗುಣ । ನುತಿಪ । ಮೇಲುಭಕತನಾ ॥ ೪ ॥ ಭೂತಭಾವನಾ । ಜಗ । ನ್ನಾಥವಿಠಲನಾ ॥ ಪ್ರೀತಿಪಾತ್ರನಾ । ನಂಬಿ । ರೀತನೀಕ್ಷಣಾ ॥ ೫ ॥

## ೬೪. ರಾಗ ಬಿಲಹರಿ, ಝಂಪೆತಾಳ.

ಬಲು ರಮ್ಯವಾಗಿಹುದು ಹರಿಯ ಮಂಚ ॥ ಪಲ್ಲ ॥ ಯಲರುಣಿ ಕುಲ ರಾಜರಾಜೇಶ್ವರನ ಮಂಚ ॥ ಅನುಪಲ್ಲ ॥ ಪವನತನಯನು ಯೆನಿಪ ಪಾವನ್ನತರಮಂಚ । ಭುವನತ್ರಯವ ಪೊತ್ತ ಭಾರಿಮಂಚ ॥ ಕಿವಿಗಳಿಲ್ಲದ ಮಂಚ ಶ್ರೀನಿಕೇತನಮಂಚ । ಶಿವರೂಪದಲಿ ಹರಿಯ ವೊಲಿಸಿದ ಮಂಚ ॥ ॥ ೧ ॥ ನೀಲಾಂಬರವನುಟ್ಟು ನಳಿನಳಿಸುವಾ ಮಂಚ । ನಾಲಿಗೆ ಯೆರ ಡುಳ್ಳ ಸೈಜಮಂಚ ॥ ಸಾಲ್ವತ್ತು ಕಲ್ಪವಿ ತಪವ ಮಾಡಿದ ಮಂಚ । ಹಾಲಮುಸಲಾಹಲವ ಪಿಡಿದಿಹ ಮಂಚ ॥ ೨ ॥ ರಾಮನಾನುಜನಾಗಿ ರಣವ ಜೈಸಿದ ಮಂಚ । ತಾಮಸರುದ್ರನ ಪಡದ ಮಂಚ ॥ ಭೀಮನನು ಜನೊಳು ಆವೇಶಿಸಿದಾ ಮಂಚ । ಜೀಮೂತಮಲ್ಲರನು ಕುಟ್ಟಿದ ಮಂಚ ॥ ॥ ೩ ॥ ಜೀವನಾಮಕನಾಗಿ ವ್ಯಾಪ್ತನಾದಾ ಹರಿಯ । ಸೇವಿಸಿಯೆ ಸುಖಿಸುವ ದಿವ್ಯ ಮಂಚ ॥ ಸಾವಿರ ಮುಖದಿಂದ ತುತಿಸಿ ಹಿಗ್ಗುವ ಮಂಚ । ದೇವ ಕೀಜಠರದಿ ಜನಿಸಿದಾ ಮಂಚ ॥ ೪ ॥ ವಾರುಣಿದೇವಿಗೆ ವರನೆನಿಸುವ

ಮಂಚ । ಸಾರುವ ಭಕತರನ ಪೊರೆವ ಮಂಚ ॥ ಕಾರುಣ್ಯನಿಧಿ ಜಗನ್ನಾಥವಿಟ್ಠಲನ ವಿ । ಹಾರಕ್ಕೆ ಯೋಗ್ಯವಾದ ಶೇಷಮಂಚ ॥ ೫ ॥

೮೫. ರಾಗ ಕಾಂಬೋಧಿ, ಝಂಪೆತಾಳ.

ಅತಿ ಶೋಭಿಸುತಿದೆ ಶ್ರೀಪತಿವಾಹನಾ ॥ ಪಲ್ಲ ॥ ಚತುರದಶಭುವನಕ ಪ್ರತಿವಾಹನಾ ॥ ಅನುಪಲ್ಲ ॥ ಕಾಲನಾಮಕನಾಗಿ ಕಮಲಭವನಲಿ ಪುಟ್ಟಿ । ಕಾಲಾತ್ಮ ಹರಿಯ ಸೇವಿಪ ವಾಹನಾ ॥ ಕಾಳಗದಿ ಕಪಿವರರ ಕಟ್ಟು ಬಿಡಿಸಿದ ವಾಹನಾ । ವಾಲಖಿಲ್ಯರ ಪಡೆದ ವರವಾಹನಾ ॥ ೧ ॥ ವಿನತೆಕಶ್ಯಪಮುನಿಯ ತನಯನೆನಿಸಿದ ವಾಹನಾ । ಅನುಜರನ ಕದ್ದೊಯ್ದ ಆಪ್ತ್ಯವಾಹನಾ ॥ ವನಧಿಮಧ್ಯದಿ ನಾವಿಕರ ಭಕ್ಷಿಸಿದ ವಾಹನಾ । ಜನಕನಾಜ್ಞದಿ ಕೂರ್ಮಗಜನುಂಗಿದ್ವಾಹನಾ ॥ ೨ ॥ ಕುಲಿಶಪಾಣಿಯೊಡನೆ ಕಲಹಮಾಡಿದ ವಾಹನಾ । ಒಳ ಪೊಕ್ಕು ಪೀಯೂಷ ತಂದ ವಾಹನಾ ॥ ಮಲತಾಯಿಮಕ್ಕಳನು ಮರುಳುಗೊಳಿಸಿದ ವಾಹನಾ । ಬಲಿರಾಯನೊಯ್ದ ಮುಕುಟವ ತಂದ ವಾಹನಾ ॥ ೩ ॥ ಕೂಪಾರಾದ್ಯಡಿಗೆ ಮಂದರ ಪೊಯ್ದ ವಾಹನಾ ನಿಜ । ರೂಪದಿಂ ಹರಿಸೇವೆ ಗಯ್ವ ವಾಹನಾ ॥ ಆಪಿತೃಗಳಿಗೆ ಅಮೃತಪ್ರಾಪ್ತಿಮಾಡಿದ ವಾಹನಾ । ಸೌಪರ್ಣಿ ಪತಿಯೆನಿಪ ಪೊಂಬಣ್ಣದ್ವಾಹನಾ ॥ ೪ ॥ ಪನ್ನಗಶಯನ ವಾಹನಾ ಪತಿತಪಾವನ ವಾಹನಾ । ಸನ್ನುತಿಪ ಭಕತರನ ಪೊರೆವ ವಾಹನಾ ॥ ಪನ್ನಗಾಚಲವಾಸ ಜಗನ್ನಾಥವಿಠಲಗೆ । ಉನ್ನಂತ ಪ್ರಿಯವಾದ ಗರುಡವಾಹನಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೮೬. ರಾಗ ಶಂಕರಾಭರಣ, ಅಟತಾಳ.

ಭಾರತೀ । ಮಜ್ಜನನಿಯೇ । ಭಾರತೀ ॥ ಪಲ್ಲ ॥ ಭಾರತೀ ಭರತನರ್ಧಾಂಗೀ । ಕರು । ಣಾರಸಪೂರಿತಾಪಾಂಗೀ ॥ ಆಹ ॥ ತಾರಕ್ಷ ಪ್ರಮುಖವೈಕಾರಿಕ ದೇವಗ । ಣಾರಾಧಿತಾಂಘ್ರಿಸರೋರುಹೆ ಪಾಲಿಸೇ ॥ ಅನುಪಲ್ಲ ॥ ವಿದ್ಯುನ್ನಾಮಕ ವಿಧಿಜಾತೇ । ಕೃತಿ । ಪ್ರದ್ಯುಮ್ನಜಠರ ಸಂಭೂತೇ ।

ಅನ । ವದ್ಯಸದ್ಗುಣಗಣವ್ರಾತೇ । ಬ್ರಹ್ಮ । ವಿದ್ಯವ ಪಾಲಿಸೆ ಮಾತೇ ॥ ಆಹ ॥ ಬುದ್ಧ್ಯಭಿಮಾನಿಯೆ ಸದ್ಯೋಜಾತನ ಪೆತ್ತ । ಶ್ರದ್ಧನಾಮಕ ಅನಿರುದ್ಧನ್ನ ತೋರಿಸೇ ॥ ೧ ॥ ಗುಣತ್ರಯಾತ್ಮಕವಾದ ಲಿಂಗ । ದೊಳು । ಅಣುರೂಪಳಾಗಿ ತುರಂಗ । ಮುಖ । ಅನಿಲಾಂತರ್ಗತ ಪಾಂಡುರಂಗ । ನಂಘ್ರಿ । ವನಜಯುಗಳಮತ್ತಭೃಂಗಾ ॥ ಆಹ ॥ ಎನಿಸಿ ತತ್ವ ಕಾರ್ಯ ಅನಿರುದ್ಧದೇಹಸ್ಥ । ಅನಿಮಿಷರೊಳು ಪೊಕ್ಕು ದ್ವಿನವರೂಪದಿ ಮಾಳ್ಪೇ ॥ ॥ ೨ ॥ ಕಾಳಿ ದ್ರೌಪದಿ ಶಿವಕನ್ಯಾ । ಮನ್ಮ । ನಾಲಯದೊಳು ನಿಲ್ಲೆ ಘನ್ನಾ । ಪ್ರಾಜ್ಞ । ಮೌಳಿಮಣಿಯೆ ನಿತ್ಯ ಯನ್ನಾ । ಪರಿ । ಪಾಲಿಸೆ ನಂಬಿದೆ ನಿನ್ನ ॥ ಆಹ ॥ ಶೈಲಜೆಶ್ಯಾಮಲೆ ಪೌಲೋಮಿವುಷರಿಂದ । ವ್ವೋಲಗ ಕೈಕೊಂಬ ಕಾಲಾಭಿಮಾನಿಯೇ ॥ ೩ ॥ ವಂದಿಪೆ ನಿನಗಿಂದ್ರ ಶಯುನಾ,। ನಳ । ನಂದಿನಿ ಕರುಣಿಸು ಜ್ಞಾನಾ । ಶ್ರೀಮು । ಕುಂದನ ಪರಮಕಲ್ಯಾಣಾ । ಗುಣ । ಸಿಂಧುವಿನೊಳಗೆ ಪಾಠೀನಾ ॥ ಆಹ ॥ ನಂದದಿ ಚರಿಸುವ ಗಂಧವಾಹನ ರಾಣಿ । ಸಿಂಧೂರಗಮನೆ ಪುರಂದರರಾಧಿತೇ ॥ ೪ ॥ ನಿಗಮತತಿಗಳಭಿಮಾನೀ । ನಿನ್ನ । ಪೊಗಳಲೆನ್ನೊಶವೆ ಕಲ್ಯಾಣೀ । ಆಪ । ನ್ನಗರಾಜಸಹಸ್ರವಾಣಿ । ಇದ । ಬಗಬಗೆ ಸ್ತುತಿಪೆ ಸುಶ್ರೋಣಿ ॥ ಆಹ ॥ ಮುಗಿವೆ ಕರಗಳೆನ್ನಾವಗುಣಗಳೆಣಿಸಾದೆ । ಜಗನ್ನಾಥವಿಠಲನಂಘ್ರಿಗಳ ಧ್ಯಾನವನೀಯೇ ॥ ೫ ॥ ಶ್ರೀಃ ॥

೮೭. ರಾಗ ಶಂಕರಾಭರಣ, ಝಾಪುತಾಳ.

ಪವಮಾನ । ನಮ್ಮ ಗುರು । ಪವಮಾನ ॥ ಪಲ್ಲ ॥ ಪವಮಾನ ಪಾವನ ಚರಿತಾ । ಪದ್ಮ । ಭವನಪಾದಾರ್ಹನೆ ನಿರತಾ ॥ ಅಹಾ ॥ ಶ್ರವಣಾದಿ ಭಕುತಿ ಜ್ಞಾನವನಿತ್ತು ಸಲಹೋ ಮೂ । ರವತಾರಾತ್ಮಕ ತತ್ವ ದಿವಿಜ ನಿಯಾಮಕ ॥ ಅನುಪಲ್ಲ ॥ ಪ್ರಾಣಾಪಾನಾವ್ಯಾನೋದಾನ । ಹೇ ಸ । ಮಾನರೂಪಕನೆ ವಿಜ್ಞಾನ । ತತ್ವ । ಮಾನಿಯೇ ಅಮೃತಾಭಿಧಾನ । ಚತು । ರಾನನತನಯ ಗೀರ್ವಾಣ ॥ ಅಹಾ ॥ ಸೇನಾಧಿಪತಿ ನಿನ್ನ ಜ್ಞಾನ ಸಾರದಲಿಪ್ಪ । ಮಾನವರನು ಕಾಯೋ ಮೌನಿಧ್ಯಾನಗಮ್ಯ ॥ ೧ ॥

ನಾಗಕೂರ್ಮದೇವದತ್ತ । ಕೃಕಲ । ಯೋಗಿವರಿಯು ಮುಕ್ತಾಮುಕ್ತ । ಕ್ಲೃಪ್ತ । ಭೋಗಂಗಳೀವ ಸುಶಕ್ತ । ತಲೆ । ಬಾಗಿ ಬೇಡುವೆ ಸರ್ವೋದ್ರಿಕ್ತ ॥ ಅಹಾ ॥ ಪೋಗುತಲಿದೆ ಹೊತ್ತು ಜಾಗುಮಾಡದೆ ನಿಜ । ಭಾಗವತರೊಳಿಡೊ ಮೃಗಣ್ಣಪದನಾಳ್ದ ॥ ೨ ॥ ಮೂಲೇಶನಂಘ್ರಿಸರೋಜ । ಭೃಂಗ । ಏಳೇಳು ಲೋಕಾಧಿರಾಜ । ಇಪ್ಪ । ತ್ತೇಳು ರೂಪಕ ರವಿ ತೇಜ । ಲೋಕ । ಪಾಲಕರೊಳು ಮಹೋಜಾ ॥ ಅಹಾ ॥ ಕಾಳಿರಮಣ ನಿನ್ನ ಕಾಲಿಗೆರಗುವ ಕೃ । ಪಾಳು ಭಕ್ತಿ ಜ್ಞಾನವಾಲಗ ಕರುಣಿಸೋ ॥ ॥ ೩ ॥ ಮೂರುಕೋಟಿ ರೂಪಧರನೆ । ಲೋಕ । ಧಾರಕ ಲಾವಣ್ಯಾಕರನೆ । ಸರ್ವ । ಪ್ರೇರಕ ಭಾರತೀವರನೆ । ತ್ರಿಪು । ರಾರಿಗೆ ವಜ್ರಪಂಜರನೇ ॥ ಅಹಾ ॥ ನೀರಜಜಾಂಡದಿ ಮೂರೇಳು ಸಾವಿರ । ದಾರನೂರು ಜಪ ಬೇರೆ ಬೇರೆ ಮಾಳ್ಪ ॥ ೪ ॥ ಆಖಣಾಶ್ಮ ಸಮಚರಣ । ಪದ್ಮ । ಲೇಖರ ಮಸ್ತಕಾಭರಣ । ಕಲ್ಪ । ಶಾಖಿಯಂತೆ ಅತಿಕರುಣ । ದಿಂದ । ಈಖಂಡದೊಳು ಮಿಥ್ಯಾವರಣ ॥ ಅಹಾ ॥ ನೀ ಖಂಡಿಸಿದಿ ದಂಡಮೇಖಲಭೂಷಣ । ಆಖುವಾಹನಪಿತ ಆಖಂಡಲಾರ್ಚಿತಾ ॥ ೫ ॥ ಶ್ರೀವಲ್ಲಭಗೆ ಪ್ರತಿಬಿಂಬ । ನಾಗಿ । ಜೀವವೇದಕಾಲಸ್ತಂಭ । ಗತ । ಆವಾಗ ಹರಿರೂಪ ಕಾಂಬ । ಶಕ್ತ । ನೀನಹುದೋ ಎಂತೆಂಬ ॥ ಅಹಾ ॥ ದೇವತೆಗಳಿಗುಂಟೆ ಈವಿಭವ ಜಗ । ಜೀವನ ಜಯಶೀಲಾ ನಾ ವಂದಿಸುವೆ ನಿತ್ಯಾ ॥ ॥ ೬ ॥ ದಕ್ಷಿಣಾಕ್ಷಿಗತವಚ್ಛಾ । ರೂಪ । ದಕ್ಷನಹುದೋ ಪರಮೋಚ್ಛಾ । ಚಾರು । ತ್ರ್ಯಕ್ಷಾದಿ ಸುರರೊಳಾಧ್ಯಕ್ಷಾ । ಸರ್ವಾ । ಪೇಕ್ಷರಹಿತನೆ ಸ್ವೇಚ್ಛಾ ॥ ಅಹಾ ॥ ಮೋಕ್ಷಾದಿ ದ್ವಾತ್ರಿಂಶಲ್ಲಕ್ಷಣ ಪುರುಷ ನಿ । ರೀಕ್ಷಿಸಿ ಕರುಣದಿ ರಕ್ಷಿಸೋ ಯೆನ್ನನು ॥ ೭ ॥ ಆಧಿಭೂತ ಅಧ್ಯಾತ್ಮಗತನೇ । ವಿಮಲ । ಅಧಿದೈವರೊಳು ಪ್ರವಿತತನೆ । ಕಲಿ । ಹೃದಯವಿಭೇದನಾರತನೇ । ಯೆನ್ನ । ವದನದಿ ನಿಲಿಸೋ ಮಾರುತನೇ ॥ ಅಹಾ ॥ ಬದರಿಕಾಶ್ರಮದೊಳು ಹದಿನಾರು ಸಾವಿರ । ಸುದತೀರ ಕಾಯ್ದ ನಾರದವರದನನುತಿಪ ॥ ॥ ೮ ॥ ಮಾತರಿಶ್ವ ಮಹಾಮಹಿಮಾ । ಸರ್ವ । ಚೇತನ ಹೃದ್ಗತಹನುಮಾ । ಭೀಮ । ಭೂತಳದೊಳು ಮಧ್ವನಾಮಾ । ದಿಂದ । ಜಾತ

ನಾಗಿ ಜಿತಕಾಮಾ ॥ ಆಹಾ ॥ ಆಶಿಪ್ಪಣ್ಣಾದಿ ವಿಖ್ಯಾತ ಮಾಯ್ಗಳ ಗೆದ್ದ । ಸೀತಾರಮಣ ಜಗನ್ನಾಥವಿಟ್ಠಲ ದೂತ ॥ ೯ ॥ ಶ್ರೀಃ ॥

### ೮೮. ರಾಗ ಅಠಾಣ, ಛಾಪುತಾಳ.

ರಾಮಾ ರಘುಕುಲಲಲಾಮಾ ॥ ಪಲ್ಲ ॥ ಸುರಸಾರ್ವಭೌಮ । ಪಾಹಿ ಗುಣಧಾಮ ॥ ಅನುಪಲ್ಲ ॥ ವೀಂದ್ರವಾಹನ ಫಣೀಂದ್ರ । ಶಯನ ವರ ದೇಂದ್ರನುತರಾಮಚಂದ್ರಾ ॥ ೧ ॥ ಚಂಡಬಾಣಕೋದಂಡಾ । ವಿಧೃತ ದೋರ್ದಂಡಾ ಲೋಕೈಕಶುಂಡಾ ॥ ೨ ॥ ಗೋಪ್ತಾ ಮಾಜಗದಾಪ್ತಾ । ದೋಷನಿರ್ಲಿಪ್ತಾ ವಿಬುಧಪರಮಾಪ್ತಾ ॥ ೩ ॥ ಘನ್ನಾಸಾಪರಿಛಿನ್ನಾ । ಕಾಲಾತಿಭಿನ್ನ ಜಗದ ಮೋಹನ್ನಾ ॥ ೪ ॥ ಅಂಬಾವಲ್ಲಭನ ಬಿಂಬಾ । ಸುರಮುನಿಕದಂಬಾ ಸೇವೆ ಕೈಕೊಂಬಾ ॥ ೫ ॥ ಗಣ್ಯಾಗಣ್ಯನೆ ಶರಣ್ಯ । ಸಲಹೋ ನಿರ್ವಿಣ್ಣ ಸುರವರವರೇಣ್ಯ ॥ ೬ ॥ ಜ್ಞಾನಾನಂದಾದಿ ನಾನಾ । ಗುಣಪೂರ್ಣ ಶ್ರೀನಾರಾಯಣಸಮಾನಾ ॥ ೭ ॥ ಕಪಿಲ ಭಕ್ತರಿಗೆ ಸುಫಲಾ । ದಾಯಕನೆ ಚಪಲಚಿತ್ತರಿಗೆ ಉಪಲಾ ॥ ೮ ॥ ಸೀತಾಪತೇ ಜಗನ್ನಾಥ । ವಿಠಲ ವಿಖ್ಯಾತಾ ಭವವನಧಿಪೋತಾ ॥ ೯ ॥ ಶ್ರೀಃ ॥

### ೮೯. ರಾಗ ಕಾಂಬೋಧಿ, ಝಂಪೆತಾಳ.

ಇದನೆ ಪಾಲಿಸು ಪಾಲಿಸೆನಗೆ ದೇವಾ ॥ ಪಲ್ಲ ॥ ವಿದುರಸನ್ನುತಮಹಿಮ । ಪದೆಪದೆಗೆ ಬಿನ್ನೈಪೆ ॥ ಅನುಪಲ್ಲ ॥ ಶ್ರೀವಿರಿಂಚಾದ್ಯಖಿಳಚೇತನಾಚೇತನವು । ಶ್ರೀವರನೆ ನಿನಗಧಿಷ್ಠಾನವೆಂದೂ ॥ ಸ್ಥಾವರಾರೊಳಗೆ ನೈಜನುಯೆನಿಸಿ ಪರಿಣಾಮ । ವೀವೆ ವೃದ್ಧಿಹ್ರಾಸಸರ್ವಕಾಲದಲೆಂಬೋ ॥ ೧ ॥ ಪ್ರಕೃತಿಗುಣಗಳ ಪ್ರವೇಶಿಸಿ ಬಾಧ್ಯಬಾಧಕನು । ಅಕೃತಜ್ಞ ನೀನೆನಿಸಿ ಭಕತಜನರಾ ॥ ಸುಕೃತದುಷ್ಕೃತಕರ್ಮ ಪರಿಹರಿಸಿ ಪಾಲಿಸುವೆ । ಸಕೃತ ನಿನ್ನನು ಸ್ಮರಿಸಿ ಹಿಗ್ಗುವರ ಸಂಗಸುಖ ॥ ೨ ॥ ಕರ್ತೃ ಕಾರ್ಯತೃಪ್ರೇರಕಪ್ರೇರ್ಯಸುಖಸಾಕ್ಷಿ । ಕ್ಷೇತ್ರಧನಧಾನ್ಯಹಿಕಪಾರತ್ರಿಕಾ ॥ ಮಿತ್ರತಮ ಶ್ರೀಜಗನ್ನಾಥವಿಟ್ಠಲನೆ ಸ । ರ್ವತ್ರವ್ಯಾಪಕ ಮಮ ಸ್ವಾಮಿಯೆಂಬೋ ಜ್ಞಾನ ॥ ೩ ॥ ಶ್ರೀಃ ॥

### ೯೦. ರಾಗ ಕಾಂಬೋಧಿ, ಝಂಪೆತಾಳ.

ಬಿನ್ನೈಪೆ ನಿನಗಾನು ಭೀಮಸೇನಾ ॥ ಪಲ್ಲ ॥ ಬನ್ನಬಡುತಿಹ ಜನರ ಭಯುವ ಪರಿಹರಿಸೆಂದು ॥ ಅನುಪಲ್ಲ ॥ ನೀಚರಿಂದಲಿ ಬಂದ ಭಯಗಳಿಂದಲಿ ಜನರು । ಯೋಚಿಪರು ಯೆಮಗಾರು ಗತಿಯೆನುತಲಿ ॥ ಕೀಚಕಾಂತಕ ನಿನ್ನ ಬಹುಕೀರ್ತಿಯನು ಕೇಳಿ । ಯಾಚಿಸುವೆ ನಿನಗಾನು ಯೆಲ್ಲರನು ಸಲಹೆಂದು ॥ ೧ ॥ ರೋಚನೇಂದ್ರನೆ ಭವ ವಿಮೋಚಕನು ನೀನೆ ಸಚ । ರಾಚರಕೆ ಸಂತತ ಪುರೋಚನಾರೆ ॥ ಪ್ರಾಚೀನಕರ್ಮ ಬಲ ವೀಚಿಯೊಳು ಮುಣುಗಿ ಹರ । ಖೇಚರೇಂದ್ರಾಹಿಪ ತ್ರಿಲೋಚನರ ಗುರು ಸಲಹೊ ॥ ೨ ॥ ಖಚರೋತ್ತಮನೆ ನಿನ್ನ ಸುಚರಿತ್ರಗಳ ನಿಚಯ । ರಚನೆ ಗೈಬಲ್ಲೆನೇ ಅಚಲಸತ್ವಾ ॥ ಪ್ರಚಲಿಸುತ್ತಿಹ ಮನೋವಚನಕಾಯವು ಘಟೋ । ತ್ಕಚಜನಕ ಸಜ್ಜನರ ಪ್ರಚಯುವಮಾಡುವದೆಂದು ॥ ೩ ॥ ಈಚತುರ್ದಶಭುವನದಾಚಾರ್ಯ ದೇಶಕಾ । ಲೋಚಿತ ಸುಧರ್ಮಗಳ ಸೂಚಿಸೆನಗೆ ॥ ಪಾಚಕನೆ ನಿನ್ನಡಿಗೆ ಚಾಚುವೆನು ಕರ ಸವ್ಯ । ಸಾಚಿ ಸೋದರನೆ ದಯ ಗೋಚರಿಸಿ ಸಲಹೆಂದೂ ॥ ೪ ॥ ವಾಚಾಮಗೋಚರ ಜಗನ್ನಾಥವಿಠಲನ । ಶ್ರೀಚರಣಭಜಕನೆ ನಿಶಾಚರಾರೀ ॥ ವೈಚರ್ಮ ಸುಲಿದು ದುಶ್ಯಾಸನನ ರಕುತ ಪರಿ । ಷೇಚನೆಯ ಮಾಡಿದೆ ಮಹೋಚಿತವಿದೆಂದರಿದು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೯೧. ರಾಗ ಸೌರಾಷ್ಟ್ರ, ತ್ರಿಪುಟತಾಳ.

ಶರಣು ಶಂಕರಭೂಷಣಾದ್ರಿಗೆ । ಶರಣು ಅಭಯಾಚಲನಿಗೆ ॥ ಪಲ್ಲ ॥ ಶರಣು ಖಗಮೃಗತರುಲತಾಂಗಗೆ । ಶರಣು ವಿಂಶತಿನಾಮಗೆ ॥ ಶರಣು ಶರಣು ॥ ಅನುಪಲ್ಲ ॥ ವರಹನೀಲಾಂಜನಕನಕ ಋಷಿ । ಗರುಡ ಫಣಿ ನಾರಾಯಣ ॥ ಉರಗತೀರ್ಥಾನಂದ ಶ್ರೀಪು । ಷ್ಕರವೃಷಭ ವೈಕುಂಠಗೆ ॥ ॥ ೧ ॥ ಜ್ಞಾನಪರ್ವತ ಮೇರುತನಯಗೆ । ಶ್ರೀನಿವಾಸ ಸುಕ್ರೀಡಗೆ ॥ ದೀನರೊಚಲ ವೆಂಕಟಾದ್ರಿಗೆ । ಕ್ಷೋಣಿಯೊಳು ಸುರಮಾನ್ಯಗೆ ॥ ೨ ॥ ರತುನ

ಕಾಂಚನ ಶ್ರೀನಿವಾಸನ । ಪ್ರತಿಮೆಯುಂದದಿ ಪೊಳೆವಗೆ ॥ ಕೃತಿರಮಣ ಜಗನ್ನಾಥವಿಠಲಗೆ । ಅತುಳಮಂಗಳವೆನಿಪಗೆ ॥ ೩ ॥ ಶ್ರೀಃ ॥

೯೨. ರಾಗ ಯರಕಲಕಾಂಬೋಧಿ, ಝುಂಪೆತಾಳ.

ಸೋಮ ಶಿವ ಶರ್ವ ಭವ ಶ್ರೀಕಂಠ ನಿನ್ನ ಪದ । ತಾಮರಸಯುಗ್ಮಗಳಿಗಾನಮಿಸುವೆ ॥ ಪಲ್ಲ ॥ ಮೃತ್ಯುಂಜಯ ಮೃಗಾಂಕ ಕೃತ್ತಿವಾಸ ಕೃಪಾಳೊ । ವಿತ್ತಪತಿಸಖ ವಿನಾಯಕನ ಜನಕಾ ॥ ಭೃತ್ಯವರ್ಗಕೆ ಬಹಾಪಮೃತ್ಯು ಪರಿಹರಿಸಿ ಸಂ । ಪತ್ತುಪಾಲಿಪುದು ನಿವೃತ್ತಿ ಸಂಗಮವಾಸ ॥ ॥ ೧ ॥ ಗೋಪತಿಧ್ವಜ ಘೋರಪಾಪಸಂಹರಣ ಹರಿ । ತೋಪಲೋಪಮಕಂಠಗರ ಭೂಷಣಾ ॥ ಶ್ರೀಪತಿಯ ಶ್ರೀನಾಭಿಕೂಪಸಂಭವತನಯ । ನೀ ಪಾಲಿಸೆನ್ನ ವಿರೂಪಾಕ್ಷ ಗುರುವೇ ॥ ೨ ॥ ಭಸಿತ ಭೂಷಿತ ಡಮರು ತ್ರಿಶೂಲಗಯ್ಯನೆ ಶಂಭು । ಕಿಸಲಯೋಪಮನೆ ರವಿಶಶಿಲೋಚನಾ ॥ ಅಸುರರಿಪು ಸಿರಿಜಗನ್ನಾಥವಿಟ್ಠಲನ ಪದ । ಬಿಸಜಧ್ಯಾನವನೀಯೊ ಹಸನಾಗಿ ಕಾಯೋ ॥ ೩ ॥ ಶ್ರೀಃ ॥

೯೩. ರಾಗ ಮಧ್ಯಮಾವತಿ, ತ್ರಿಪುಟತಾಳ.

ಪನ್ನಗಾದ್ರಿನಿವಾಸ ॥ ಪಲ್ಲ ॥ ಸುದರುಶನ ಪಾಂಚ । ಜನ್ಯಧರ ದೂರ್ವಾಸಾ । ಪತ್ರಿಮುಖ್ಯಮುನಿಸ । ನ್ಮಾನ್ಯ ಕರುಣಿ ವಿಲಾಸಾ ॥ ಶ್ರೀಶ್ರೀನಿವಾಸಾ ॥ ಯೆನ್ನವಗುಣ ಸಹಸ್ರವೆಣಿಸದೆ । ನಿನ್ನವರೊಳಗೆಣಿಸು ಅನುದಿನಾ । ಮನ್ಮನಾಲಯದೊಳು ನೆಲಸು ವ್ಯೆ । ಗಣ್ಣನನುಜ ವರಾಭಯ ಶ್ರೀಕರ ॥ ॥ ಅನುಪಲ್ಲ ॥ ಕಾಮಿತಪ್ರದಕೋಲಾ । ಅಂಜನಾಧರಾಧರ । ಧಾಮ ಭೂಮಿವಿಲೋಲ । ಶಂಖಣ ನೃಪವರದ । ಹೇಮಲೋಚನ ಕಾಲ । ದ್ವಿಜಮಹಿಳೆಯುಳುಹಿದ । ಶ್ಯಾಮಲಾಂಗ ಸುಶೀಲ । ವೆಂಕಟಕುಲಾಲ ॥ ಭೀಮಗೊಲಿದ ಮಹಾಮಹಿಮನೆ ಪಿ । ತಾಮಹನ ನಾಸೋದ್ಭವನೆ ವಿಯ । ದ್ಭೂಮಿಪತಿ ಜಾಮಾತ ಕಿಟಿ ಸುತ್ರಾಮಸುತಸೂತಪ್ರಮೋದ ಸು । ಧಾಮಸೌಖ್ಯಪ್ರದ ವರದತ್ರಯಿಗಾಮಯನೆ ಪ್ರಣತಾರ್ತಿಹರ ಬಲ । ರಾಮನಾ

ನುಜ ದಂಷ್ಟ್ರಿಸಾಲಿಗ್ರಾಮುಸದನ ಸಹಸ್ರನಾಮ ॥ ಸಾಮಜಪತಿಪೋಷಕ ರಿಪುವನ ಧೂಮಧ್ವಜ ವಿಧಿಭವ ಸೇವಿತ । ವ್ಯೋಮಾಳಕಸಖ ಸರ್ವಜ್ಞ ರಮಾಮನೋಹರ ಮನ್ನಿಪುದೆನ್ನ ॥ ೧ ॥ ದೀನಜನಮಂದಾರ । ದೇವಕಿ ಸುತನೆ ಜಗ । ತ್ರಾಣಗುಣ ಗಂಭೀರ । ಪೃಥ್ವೀಶ ತೊಂಡ । ಮಾನವರದ ಉದಾರಾ । ಲುಬ್ಧಕನ ವಿಷ್ವ । ಕ್ಸೇನನೆನಿಸಿದ ಧೀರ । ವೆಂಕಟವಿಹಾರ ॥ ವೈನತೇಯವರೂಥ ಖಳಸ್ವಭರ್ಾನುವಿನ ತಲೆಗಡಿದು ರವಿಶಶಿ । ಕ್ಷೋಣಿಜ ಬುಧಗುರುಕಲಿಶನಿಗಳ ಶ್ರೇಣಿಯಲಿ ಮಾನಿಗಳ ಮಾಡ್ದ ಮ । ಹಾನು ಭಾವ ಮನೋಜಪಿತ ಚಲುವಾನನನ ಕಲಿಮಲಾಪಹಾರಿ ಕೃ । ಶಾನು ಸಖಸಂಪೂಜ್ಯ ಸುಮನಸಧೇನು ಶರಣಜನರ್ಗೆ ಸಂತತ । ನಾ ನಮಿಸುವೆ ನಳಿನಜಪಿತ ನಿರ್ವಾಣದ ನಿರವದ್ಯ ನಿರುಜ ಬ್ರ । ಹ್ಮಾಣಿ ಸುರನಿಕರ ನಿಲಯನು ಸಂಧಾನಕೆ ಕೊಡು ಬಹುವಿಧ ಕರ್ಮ ॥ ೨ ॥ ಸಾಗ ಶ್ರೀಮ ದನಂತಾ । ಸನಕಾದಿಸೇವ್ಯ । ಪಾದಾರವಿಂದಮಹಂತಾ । ಸತ್ವಾದಿತ್ರಿಗುಣ ವಿ । ದೂರ ದಿತಿಜ ಕೃತಾಂತಾ । ಗುಣರೂಪಪಾರಾ । ವಾರ ವಿಗತಾದ್ಯಂತಾ । ಶ್ರೀಭೂಮಿಕಾಂತಾ ॥ ಭಾರಿಶಫರಾ ಕಮಠವರಹ ಕರ್ಬುರಕಶಿಪುವಿದಾರ ಣನೇ ಭಾ । ಗೀರಥಿಯ ಪದನಖದಿ ಪಡದಂಗಾರವರ್ಣನೆ ಭೃಗುಕು ಲೋದ್ಭವ । ವಾರಿನಿಧಿಬಂಧನ ವನೌಕಸವಾರಪೋಷಕ ನಂದಗೋಪ ಕು । ಮಾರ ತ್ರಿಪುರವಿದೂರ ತುರಗವನೇರಿದ ಜಗನ್ನಾಥವಿಠಲ । ಸಾರುವೆ ತವ ಪದಪಂಕಜ ಜಂಭಾರಿ ಮದವಿಭಂಜನ ಭವಭಯ । ತಾರಕ ನಿನ್ನ ವರೊಳು ತತ್ವವಿಚಾರವ ಕೊಡು ಚಿರಕಾಲದಲಿ ॥ ೩ ॥ ಶ್ರೀಃ ॥

೯೪. ರಾಗ ಭೈರವಿ, ಅಟತಾಳ.

ಪಿಡಿ ಯೆನ್ನ ಕೈಯ್ಯ । ರಂಗಯ್ಯ । ಪಿಡಿ ಯೆನ್ನ ಕೈಯ್ಯಾ ॥ ಪಲ್ಲ ॥ ಪಿಡಿ ಯೆನ್ನ ಕೈಯ್ಯ ಪಾಲ್ಗಡಲಶಯನ ಮೋಹ । ಮಡುವಿನೊಳ್ ಬಿದ್ದು ಬಾಯ್ಬಿಡುವೆ ವೇಗದಿ ಬಂದು ॥ ಅನುಪಲ್ಲ ॥ ನೀರಜನಾಭ । ನಂಬಿದೆ ನಿನ್ನ । ನೀರಪ್ರದಾಭ ॥ ಕಾರುಣ್ಯನಿಧಿ ಲಕ್ಷ್ಮೀ ನಾರಸಿಂಹನೆ ಪರಿ । ವಾರಸಹಿತ ಈಶರೀರದೊಳಡಗಿರ್ದು ॥ ಘೋರತರ ಸಂಸಾರ ಪಂಕದಿ ಚಾರುವರಿವನ ದೂರ ನೋಡುವ । ರೇ ರಮಾಪತೆ ಸಾರುಮಾಡದೆ

ಚಾರು ವಿಮಲಕರಾರವಿಂದದಿ ॥ ೧ ॥ ಅನಿಮಿತ್ತಬಂಧು । ನೀನೇ ಗತಿ । ಗುಣಗಣಸಿಂಧೂ ॥ ಅನಘ ನಾ ಸೇವಿಸುವೆನು ವಿಧಿಭವ ಸಂಕ್ರಂ । ದನ ಮುಖ ದೇವಸನ್ಮುನಿಗಣಾರ್ಚಿತಪಾದಾ ॥ ಅನುಜತನುಜಾಪ್ತಾನುಗ ಜನನಿಜನಕ ಪಶುಕೃಷಿಧನ ಸದನ ಸಂ । ಹನನ ಮೊದಲಾದಿನಿತು ಸಾಕುವ ಘನತೆ ನಿನ್ನದು ಜನುಮಜನುಮದಿ ॥ ೨ ॥ ಶ್ರೀಜಗನ್ನಾಥ । ವಿಠಲ ದ್ವಿಜ । ರಾಜವರೂಥ ॥ ಓಜಕಾಮಿತಕಲ್ಪಭೂಜ ಭಾಸ್ಕರ ಕೋಟಿ । ತೇಜ ಮನ್ಮನದಿ ವಿರಾಜಿಸು ಪ್ರತಿದಿನ ॥ ಈಜಗತ್ರಯಭಾಜ ನನೆ ಬಹುಸೋಜಿಗವೆಲಾ ನೈಜ ನಿಜ ನಿ । ರ್ವ್ಯಾಜದಿಂದಲಿ ನೀ ಜಯ ಪ್ರದ ನೈಜಜನರಿಗೆ ಹೇ ಜಗತ್ಪತೇ ॥ ೩ ॥ ಶ್ರೀಃ ॥

೯೫. ರಾಗ ಶಂಕರಾಭರಣ, ಅಟತಾಳ.

ನಿರ್ಜರತರಂಗಿಣಿತೀರ । ನರಸಿಂಹ ॥ ಪಲ್ಲ ॥ ಸಾರಿದೆನೋ ತ್ವತ್ಪಾದಪಂಕಜ ॥ ತೋರು ಮನದಲಿ ತವಕದಿ ॥ ಅನುಪಲ್ಲ ॥ ನಾರದನುತ ಚಿಚ್ಛರೀರಗ ಶ್ರೀಭೂದು । ಗಾರ್ರಮಣ ದುರಿತಾರಿ ಬ್ರಹ್ಮಸ । ಮೀರಮುಖ ವಿಬುಧಾರ್ಚಿತ ॥ ಚಾರುಚರಣಯುಗಾ ಕ್ಷೀರಾಬ್ಧಿಶಯನ ಮ । ದ್ವಾರ ನಿನ್ನದು ಮೂರು ಲೋಕದ ಸೂರಿಗಮ್ಯ ಸುಖಾತ್ಮಕ ॥ ೧ ॥ ವೇದವೇದ್ಯ ಸಂಸಾರೋದಧಿತಾರಕ । ಭೇದಾ ಭೇದವಿಷಾಗವೇ ಮೊದಲಾದ ದೋಷ ವಿವರ್ಜಿತ ॥ ಶ್ರೀದಶ್ರೀಶ ಅನ್ನನಾದ ಆತ್ಮಕಾಮಾ । ಬಾದರಾಯಣ ಭಕ್ತವರ ಪ್ರಹ್ಲಾದ ಪೋಷಕ ಪಾಹಿ ಮಾಂ ॥ ೨ ॥ ಹೋತೃಹೃದ್ಯ ಜಗನ್ನಾಥವಿಠಲ ನಿನ್ನ । ಮಾತು ಮಾತಿಗೆ ಸ್ಮರಿಸುತಿಹಾಸಚ್ಛ್ರೋತನರಾ ನೀ ಸರ್ವದಾ ॥ ವೀತಶೋಕಭವ ಭೀತಿಬಿಡಿಸಿ ತವ । ದೂತರೊಳಗಿಡು ಮಾತರಿಶ್ವಗ ಭೂತಭಾವನ ಭವ್ಯದಾ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೯೬. ರಾಗ ಶಂಕರಾಭರಣ, ಅಟತಾಳ.

ಮುರ ಪುರಹರ ಪಾಹಿ । ಮುರ ಪುರ ॥ ಪಲ್ಲ ॥ ಮುರ ಪುರಹರ ಲಕ್ಷ್ಮೀ ಗಿರಿಜಾ ರಮಣ । ಸುರತರ ಶಿವ ಇಂದ್ರಾವರಜಾ ॥ ಅಹಾ ॥ ಅರಿಶೂಲ

ಧರಾಭಯಕರಚತುಷ್ಟಯ ಗಂಗಾ । ಗಿರಿಚಂದ್ರಾಧರ ಹರಿಹರ ಪಾಲಿ ಪುದೆಮ್ಮಾ ॥ ಅನುಪಲ್ಲ ॥ ಪರಮಪುರುಷ ಪುಣ್ಯನಾಮ । ನಿತ್ಯ । ನಿರುಪಮ ನಿರ್ಜಿತ ಕಾಮ ॥ ಪರಿಪೂರ್ಣಜ್ಞಾನಾನಂದಾರವಿಂದನಾಭ ನಿ । ರ್ಜರಮುನಿಸೇವಿತಚರಣಕಮಲಯುಗ್ಮ । ಕ್ಕೆರಗಿ ಬೇಡುವೆ ನಿನ್ನ ರೂಪ ಸ್ಮರಣೆ ಮನದಲಿ ನೆಲೆಗೊಳಿಸು ನಿಜ । ಕರುಣಿ ಜನ್ಮಾಂತರಕು ಜ್ಞಾನೀತರರ ಸಂಗವ ಕೊಡದೆ ಪಾಲಿಸು ॥ ೧ ॥ ಜನನಾದಿದೋಷವಿದೂರ । ಗೋವ । ರ್ಧನಧರ ನವನೀತ ಚೋರ ॥ ಅನಿಮಿಷಾದಿಸಚೇತನಾಚೇತನಗಳೊಳು । ಪ್ರವಿಷ್ಟನಾಗಿ ಸದ್ಗುಣರೂಪಕ್ರಿಯೆಗಳ । ನನುಸರಿಸಿ ಕ್ರೀಡಿಸುವ ಮಹಾಮಹಿಮನೆ ನೃಹರಿ ರೂಪವ ಧರಿಸಿ ಗುಹ । ದನುಜನುದರವ ಬಗಿದು ಭೂಸಜ್ಜನರಿಗಭಯವನಿತ್ತು ಪೊರದೇ ॥ ೨ ॥ ಯೆಂತೆಂತು ಪಾಸನವ ಗೈವ । ಜೀವ । ಗಂತಂಥ ಫಲವೀವ ದೇವ ॥ ಚಿಂತಿತಫಲದಾದುರಂತಶಕ್ತ ಶ್ರೀಮ । ಧ್ವಾಂತರ್ಯಾಮಿ ಸ್ವತಂತ್ರ ಸರ್ವೋತ್ತಮ ॥ ಶಂತನುವಿನರ್ಧಾಂಗಿಪಿತ ನಿಶ್ಚಿಂತ ಗುರು ಜಗನ್ನಾಥವಿಟ್ಠಲ । ಕಂತುಹರರೂಪವ ಧರಿಸಿ ಮಣಿಮಂತ ಮುಖರನು ಭ್ರಾಂತಿಗೊಳಿಸಿದೇ ॥ ೩ ॥

## ೯೭. ರಾಗ ಕಾಂಬೋಧಿ, ಝಂಪೆತಾಳ.

ಭಾರತೀರಮಣ ಸದ್ಭಕ್ತಬಂಧೋ । ಘೋರಭವಭಯಪರಾಭವ ಗೈಸು ಬೇಗಾ ॥ ಪಲ್ಲ ॥ ಲೋಕಾಂತರಾತ್ಮಕನೆ ಈಕಮಲಜಾಂಡದೊಳು । ನಾ ಕಾಣೆ ನಿನ್ನುಳಿದು ಸಾಕುವವರಾ ॥ ನೀ ಕೈಯ್ಯ ಪಿಡಿದು ಕೃಪಾವಲೋಕನದಿಂದ । ಜೋಕೆಮಾಡುವದೆನ್ನ ವೈನಾಕಿವರ ಜನಕಾ ॥ ೧ ॥ ಅನಿಲ ಯೆನ್ನವಗುಣಗಳೆಣಿಸಲು ಕಡೆಯುಂಟೆ । ಕೊನೆಗೆ ನೀನೇ ಗತಿಯೊ ಅನಿಮಿಷೇಶಾ ॥ ಜನನಿಜನಕಭ್ರಾತ ಜನಪ ಗುರು ವರಮಿತ್ರ । ಯೆನಗೆ ನೀ ಸಕಲ ಸೌಖ್ಯದನೆಂದು ಪ್ರಾರ್ಥಿಸಿದೇ ॥ ೨ ॥ ಹನುಮಭೀಮಾನಂದ ಮುನಿರಾಯ ನಿನ್ನ ಪ್ರಾ । ರ್ಥನೆಗಯ್ಯುವರು ವಾಣಿಫಣಿಪ ಮೃಡರು ॥ ಅನಿಮಿತ್ತಬಾಂಧವ ಶ್ರೀಜಗನ್ನಾಥವಿಟ್ಠಲನ । ತನಯ ತಾವಕರ ಬಂಧನದ ಮೋಚನ ಮಾಡೋ ॥ ೩ ॥ ಶ್ರೀ ॥

೯೮. ರಾಗ ಪಂತುವರಾಳಿ, ಅಟತಾಳ.

ಹಿಂದಿಲ್ಲಾ। ಯಿಂದು। ಮುಂದಿಲ್ಲಾ। ಶ್ರೀವು। ಕುಂದಗೆ ಸಮರೆನಿಸು ವರು ಲೋಕದೊಳು ॥ ಹಿಂದಿಲ್ಲಾ ॥ ಪಲ್ಲ ॥ ವನಧಿಮಥನದಲ್ಲಿ ಅನಿಮಿ ಷರನ ಬಿಟ್ಟು ॥ ಜನನಿ ಲಕುಮಿನಾರಾಯಣನೊಲಿಸಿದಳಾಗಿ ॥ ೧ ॥ ಪ್ರಸಿತಾಮಹನು ಲೋಕಾಧಿಪ ಚತುರ್ಮುಖನಿಗೆ ॥ ತಪತಪವೆಂದ್ಹೇಳ್ದ ಗುಪಮರೆನಿಸುವರೂ ॥ ೨ ॥ ಕಂಧರವರವೀವೆ ಹಿಂದಟ್ಟಿದಸುರನ ॥ ಕೊಂದು ಶಿವನ ಕಾಯ್ದ ಇಂದಿರಾಪತಿಗೆಣೆ ॥ ೩ ॥ ಮಂದಾರಾದ್ರಿಯ ನೆತ್ತಿ ಸಿಂಧುಮಥನವಮಾಡಿ ॥ ವೃಂದಾರಕರಿಗೆ ಆನಂದವಿತ್ತಗೆ ಸರಿ ॥ ೪ ॥ ಭೃಗುಮುನಿಪನು ಬ್ರಹ್ಮಾದಿಗಳ ಪರೀಕ್ಷಿಸಿ॥ ಜಗನ್ನಾಥವಿಠಲನೇ ತ್ರಿಗುಣ ವರ್ಜಿತನೆಂದ ॥ ೫ ॥ ಶ್ರೀಃ ॥

೯೯. ರಾಗ ಕಾಂಬೋಧಿ, ಝಂಪೆತಾಳ.

ಅಪರಾಧವೆಣಿಸದಲೆ ಕಾಯಬೇಕೋ । ಕೃಪಣವತ್ಸಲನೆ ಶ್ರೀಮಧ್ವ ಮುನಿ ಗುರುರಾಯಾ ॥ ಪಲ್ಲ ॥ ನೀ ಮಾಡಿದುಪಕಾರ ನಾ ಮರೆವ ದೆಂತೊ ಲ । ಕ್ಷ್ಮೀರಮನೋಹರನನಿಜ ದಾಸಾಗ್ರಣೀ ॥ ಪಾಮರನ ಲೋಕದೊಳು ಧೀಮಂತನೆನಿಸಿದೆ ಮ । ಹಾಮಹಿಮ ನಿನ್ನ ಕರುಣಾವೃ ತಪ ಮಳೆಗರೆದೂ ॥ ೧ ॥ ಅವಿನೀತ ನಾನು ನಿನ್ನವನೆಂದು ತಿಳಿದು ಯೆ। ನ್ನವಗುಣಗಳೆಣಿಸದೆ ನಿತ್ಯದಲ್ಲಿ ॥ ಸುವಿವೇಕಿಯನೆ ಮಾಡು ಕವಿರಾಜ ತಪ ಮನೋ । ತ್ಸವಕೆ ಯೆಣೆಗಾಣೆ ನಾನವನಿಯೊಳಗಾವಲ್ಲಿ ॥ ೨ ॥ ಏನನರಿಯದ ಮೂಢಮಾನವನು ನಾನು ಸು । ಜ್ಞಾನವರ್ಯನು ನೀನೆ ಕಾಯಬೇಕು ॥ ಮಾನಸಿಧಿ ಜಗನ್ನಾಥವಿಟ್ಠಲನ ಪದಯುಗಳ । ಧ್ಯಾನಮಾಡುವ ಧೀರ ಪ್ರಾಣಪಂಚಕರಾಯಾ ॥ ೩ ॥ ಶ್ರೀಃ ॥

೧೦೦. ರಾಗ ಪಂತುವರಾಳಿ, ಅಟತಾಳ.

ವೆಂಕಟೇಶಾ ಕಾಯೋ ಕಿಂಕರರವನೆಂದೂ । ಪಂಕಜಾಸನ ಶಂಕರಾ ರ್ಚಿತ । ಶಂಖಚಕ್ರಗದಾಂಕಿತಾ ॥ ಪಲ್ಲ ॥ ವಾಸುದೇವ ನೀನೆ ಶ್ರೀಸರಸಿಜ

ಭವ । ವೀಶ ಫಣಿಪ ಮಹೇಶ ವಾಸವರಾಶೆ ಪೂರೈಸಿ ॥ ಪೋಷಿಸುವ ಜಗದೀಶಾ ಜೀವನದ ವಾ । ರಾಶಿಜಾತೆಪ್ರಾಣೇಶರವಿಸಂಕಾಶಜೀವರ ಕ್ಲೇಶಹಾ ॥ ॥ ೧ ॥ ಸ್ವಾಮಿತೀರ್ಥನಿವಾಸ ಸ್ವರಮಣ ಭಕತರ । ಕಾಮಿತಪ್ರದ ಕೈರವದಳಶ್ಯಾಮ ಸುಂದರನೆ ॥ ಹೇಮಶೃಂಗೀವರಧಾಮ ದೀನಬಂಧೋ । ಸಾಮಸನ್ನುತ ಸೋಮಧರ ಸುತ್ರಾಮಸುರಮುಖ ಸ್ತೋಮನಾ ॥ ೨ ॥ ತ್ರಿಗುಣಾತೀತ ನರಮೃಗರೂಪ ನಾ ನಿನ್ನ । ಪೊಗಳಬಲ್ಲೆನೆ ನಿಗಮವೇದ್ಯನೆ ಜಗನ್ನಾಥವಿಠಲಾ ॥ ಸ್ವಗತಭೇದಶೂನ್ಯ ಮುಗಿವೇ ಕರಗಳ ಪನ್ನಗನಗಾಧಿಪ । ಪೊಗರೋಗುವ ನೆಗೆವೊಗದ ಸೊಬಗಿನ ಸುಗುಣನೆ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೧. ರಾಗ ಕಲ್ಯಾಣಿ, ತ್ರಿಪುಟತಾಳ.

ಶರಣು ವೆಂಕಟನಾಥ । ಪೊರೆ ನಿಜ । ಕರುಣಿ ಖಗವರೂಥ ॥ ॥ ಪಲ್ಲ ॥ ನತಜನಕೃತಕರುಣಾ । ದಿತಿಸುತ । ಮಥನನೆ ತವ ಚರಣಾ ॥ ಸತತ ಯೆನಗಾಭರಣಾ । ಯೆಂದೆಂಬೆನೋ । ಗತರೋಗ ಜರಾಮರಣಾ ॥ ೧ ॥ ಸನಕಾದಿಮುನಿಮಾನ್ಯ । ನಿನ್ನವ । ರನುಗನೆನಿಸೋ ಎನ್ನಾ ॥ ಅನುಪಮಗುಣರನ್ನಾ । ವಲಿದು ಕಾಂ । ಚನ ಗಿರಿವಾಸ ಚನ್ನಾ ॥ ॥ ೨ ॥ ಯೆನ್ನ ದೋಷಗಳೆಲ್ಲ । ನೋಡದಲೆ ಪ್ರ । ಪನ್ನಜನರವತ್ಸಲ ॥ ಅನ್ನಿಗ ನಾನಲ್ಲಾ । ಶ್ರೀಗುರು ಜ । ಗನ್ನಾಥವಿಟ್ಠಲ್ಲಾ ॥ ೩ ॥ ಶ್ರೀಃ ॥

## ೧೦೨. ರಾಗ ತೋಡಿ, ಝಂಪೆತಾಳ.

ನಾರಾಯಣಾದ್ರಿಕೃತವಾಸ ಶರಣು । ತೋರಯ್ಯ ತವ ರೂಪ । ರವಿಕೋಟಿಭಾಸ ॥ ಪಲ್ಲ ॥ ಆನಂತಜನರಾಪ್ತ ನೀನೆಂದು ಕೇಳಿ ಮಿಗೆ । ಸಾನುರಾಗದಲಿ ನಡೆತಂದೆ ನಿನ್ನಯ ಬಳಿಗೆ ॥ ವಿಮಾನಾಂಕಜನಕ ತವ ಪದಯುಗಾರ್ಚನೆ ಹೀಗೆ । ಜ್ಞಾನಪೂರ್ವಕದಿಂದಲೆನಗೆ ದಯದಿ । ಪಾನೀಯಜಾಂಬಕನೆ ಪೊರೆಯೆಂದೆ ನಿನಗೆ ॥ ೧ ॥ ವಾಸುಕೀತಪಕೆ ಸಲೆ ಮೆಚ್ಚಿ ಗಿರಿಯಲಿ ನಿಂದೆ । ಆಸಲಿಲದೊಳು ಮಿಂದು ಕರಿವರ ಕರಯೆ ಬಂದೆ ॥

ವಾಸವಾತ್ಮಜನು ಬಿನ್ನೈಸೆ ನಿನ್ನಯ ಮುಂದೆ । ಆಸಮರದೊಳಗೊಲಿವೆನೆಂದೆ ನಿನಗೆ । ಪಾಸಟಿಯಾರು ನೀರಜಭವನ ತಂದೆ ॥ ೨ ॥ ಪೊಗಳಲರಿಯರು ಸುರರು ನಿನ್ನ ಮಹಿಮಾತಿಶಯ । ಬಗೆಯನರಿಯಳು ಲಕುಮಿ ಬದರಿಸನ್ನಿಭಕಾಯ ॥ ಮುಗುಧ ಮಾನವ ತಿಳಿವನೇನೋ ತಿರುಮಲರೇಯಾ । ಖಗರಾಜಗಮನಕಮನೀಯ ಪಾಹಿ । ಜಗನ್ನಾಥವಿಠಲ ವಿಗತಾಘ ಅವಿಗೇಯ ॥ ೩ ॥ ಶ್ರೀಃ ॥

೧೨೩. ರಾಗ ಕಾಂಬೋಧಿ, ಝಂಪೆತಾಳ.

ಪತಿತಪಾವನನಾಮ ಪೂರ್ಣಕಾಮಾ । ಗತಿ ನೀನೆ ಯೆನಗೆ ಸಂತತ ಪರಂಧಾಮಾ ॥ ಪಲ್ಲ ॥ ಕೃಪಣವತ್ಸಲನೆ ಯೆಮ್ಮಪರಾಧಗಳ ನೋಡಿ । ಕುಪಿತನಾಗುವರೇನೋ ಸುಫಲದಾಯಿ ॥ ನೃಪಗನಿರುದ್ಧ ಬಿನ್ನಪವ ಮಾಡುವೆ ನಿನಗೆ । ಚಪಲಚಿತ್ತರಾದ ಕಾಶ್ಯಪಿಸುರರನ ಕಾಯೋ ॥ ೧ ॥ ಮಾನ್ಯಮಾನದನೆ ಬ್ರಹ್ಮಣ್ಯದೇವನು ಯೆಂದು । ಉನ್ನತ ಶ್ರುತಿಗಳು ಬಣ್ಣಿಸುವವೂ ॥ ಸನ್ನುತಮಹಿಮನೆ ನಿನ್ನ ಪೊಂದಿದವರ । ಬನ್ನಬಡಿಸುವದು ನಿನಗಿನ್ನು ಧರ್ಮವು ಅಲ್ಲ ॥ ೨ ॥ ಹಲವು ಮಾತುಗಳಾಡಿ ಫಲವೇನೋ ಬ್ರಾಹ್ಮಣರ । ಕುಲಕೆ ಮಂಗಳವೀಯೋ ಕಲುಷದೂರಾ ॥ ಸುಲಭದೇವೇಶ ನಿನ್ನುಳಿದು ಕಾವರ ಕಾಣೆ । ಬಲಿಯ ಬಾಗಿಲ ಕಾಯ್ದ ಜಗನ್ನಾಥವಿಠಲಾ ॥ ೩ ॥ ಶ್ರೀಃ ॥

೧೨೪. ರಾಗ ಕಾಂಬೋಧಿ, ಝಂಪೆತಾಳ.

ಯಾತರವನಾನಯ್ಯ ಇಂದಿರೇಶಾ । ಹೋತಾಹ್ವಯನೆ ನಿನ್ನಾಧೀನವೀಜಗವೆಲ್ಲ ॥ ಪಲ್ಲ ॥ ಕಾಲಗುಣಕರ್ಮಸ್ವಭಾವಗಳ ಮನೆ ಮಾಡಿ । ಶ್ರೀಲೋಲ ನೀ ಸರ್ವರೊಳಗೆ ಇದ್ದು ॥ ಲೀಲೆಗೈಯುತ ಲಿಪ್ತನಾಗದೆ ನಿರಂತರದಿ । ಪಾಲಿಸುವೆ ಸಂಹರಿಪೆ ದಿವಿಜದಾನವರಾ ॥ ೧ ॥ ತಿಳಿಸಿಕೊಂಬವ ನೀನೆ ಶ್ರುತಿತತಿಗಳೊಳಗಿದ್ದು । ತಿಳಿಸುವವ ನೀನೆ ಉಪದೇಶಕರೊಳೂ ॥ ತಿಳಿವವನು ನೀನೆ ಬುಧ್ಯಾದಿಂದ್ರಿಯಗಳೊಳಗಿದ್ದು । ನೆಲೆಗೊಂಡು ನಿಖಿಳವ್ಯಾಪಾರ ಮಾಡುತಲಿಪ್ಪೆ ॥ ೨ ॥ ಅಗಣಿತಮಹಿಮ ಜಗಜ್ಜನ್ಮಾದಿ

ಕಾರಣನೆ । ತ್ರಿಗುಣವರ್ಜಿತ ತ್ರಿವಿಕ್ರಮ ತ್ರಿಧಾಮಾ ॥ ಭೃಗುಮುನಿ ವಿನುತ ಜಗನ್ನಾಥವಿಟ್ಠಲ ನಿನ್ನ । ಪೊಗಳಿ ಹಿಗ್ಗುವ ಭಾಗ್ಯ ಕೊಡು ಜನುಮಜನುಮಕೂ ॥ ೩ ॥ ಶ್ರೀಃ ॥

## ೧೧೫. ರಾಗ ಕಾಂಬೋಧಿ, ಝಂಪೆತಾಳ.

ಶ್ರೀದವಿಠಲ ಸರ್ವರಂತರಾತ್ಮಾ । ನೀ ದಯದಿ ಪೊಲಿದು ನಿತ್ಯದಲಿ ಕಾಪಾಡುವದು ॥ ಪಲ್ಲ ॥ ಚಿಕ್ಕತನದಲಿ ತಂದೆತಾಯಿಗಳು ಪೊಲಿದು ಪೆಸ । ರಿಕ್ಕಿ ಕರದರು ನಿನ್ನ ದಾಸನೆಂದೂ ॥ ಅಕ್ರೂರದಿ ಪೊಲಿದು ಭವ ದುಃಖಗಳ ಪರಿಹರಿಸಿ । ಮಕ್ಕಳನು ತಾಯ್ಸಲಹುವ ತೆರದಿ ಸಂತೈಸೂ ॥ ॥ ೧ ॥ ಶುಕನಯ್ಯ ನಿನ್ನ ಪದಭಕುತಿ ತ್ವತ್ಕಥಾಶಾಸ್ತ್ರ । ಯುಕುತಿವಂತರ ಸಂಗ ಸುಖವನಿತ್ತು ॥ ಸಕಲಕರ್ಮಗಳ ವೈದಿಕವೆನಿಸು ಪೋಷಿಸು ದೇ । ವಕಿತನಯ ನಿನ್ನವರ ಮುಖದಿಂದ ಪ್ರತಿದಿನದೀ ॥ ೨ ॥ ಮಾತರಿಶ್ವಪ್ರಿಯ ಸುರೇತರಾಂತಕನೆ ಪುರು । ಹೂತನಂದನಸಖ ನಿರಾತಂಕದೀ ॥ ನೀ ತೋರು ಮನದಿ ಸಂಪ್ರೀತಿಯಿಂದಲಿ ಪೊಲಿದು । ಹೋತಾಹ್ವಗುರು ಜಗನ್ನಾಥವಿಠಲ ಬಂಧೂ ॥ ೩ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೬. ರಾಗ ಕಾಂಬೋಧಿ, ಝಂಪೆತಾಳ.

ಅರಿತವರಿಗತಿಸುಲಭ ಹರಿಯ ಪೂಜೆ । ಅರಿಯದವ ನಿರ್ಭಾಗ್ಯತರ ಲೋಕದೊಳಗೆ ॥ ಪಲ್ಲ ॥ ಹೈಮಾಂಡಮಂಟಪವು ಭೂಮಂಡಲವೆ ಪೀಠ । ಸೋಮಸೂರ್ಯರೆ ದೀಪ ಭೂರುಹಗಳೂ ॥ ಚಾಮರಗಳತಿ ವಿಮಲವ್ಯೋಮಮಂಡಲ ಛತ್ರ । ಯಾಮಾಷ್ಟಕಗಳಷ್ಟದಳದ ಪದ್ಮವು ಯೆಂದು ॥ ೧ ॥ ಮಳೆಯೆ ಮಜ್ಜನವು ದಿಗ್ವಲಯಂಗಳೇ ವಸನ । ಮಲಯಜಾನಲವೇ ಶ್ರೀಗಂಧ ಧೂಪಾ ॥ ಇಳೆಯೊಳಗೆ ಬೆಳೆದ ಧಾನ್ಯಗಳೆಲ್ಲ ನೈವೇದ್ಯ । ಥಳಥಳಿಪ ಮಿಂಚು ಕರ್ಪೂರದಾರತಿಗಳೆಂದು ॥ ೨ ॥ ನಕ್ಷತ್ರ ಮಂಡಲವೆ ಲಕ್ಷದೀಪಾವಳಿಯು । ದಕ್ಷಿಣೋತ್ತರ ಆಯನಗಳೆ ಬನವು ॥

ವೃಕ್ಷವಲ್ಲಿಜ ಸುಫಲಪುಷ್ಪಗಳೊಳಗೆ ಲಕ್ಷ್ಮಿ । ವಕ್ಷವ್ಯಾಪಕನಾಗಿ ತಾನೆ ಭೋಗಿಪನೆಂದು ॥ ೩ ॥ ಗುಡುಗು ಸಪ್ತಸಮುದ್ರಶಿಡಿಲುಘೋಷವೇ ವಾದ್ಯ । ಪೊಡವಿಪರಿಗೀವ ಕಪ್ಪವೆ ಕಾಣಿಕೆಗಳೂ ॥ ಉಡುಪಭಾಸ್ಕರರ ಮಂಡಲಗಳಾದರ್ಶಗಳು । ನಡೆವನಡೆಗಳು ಹರಿಗೆ ಬಿಡದೆ ನರ್ತನ ವೆಂದೂ ॥ ೪ ॥ ಯುಗಚತುಷ್ಟಯುವೆ ಪರಿಯಂಕ ಪಾದಗಳಬ್ದ । ಬಿಗಿವ ಪಟ್ಟಿಗಳು ಕಂದಾಯಕಸಿಪೂ ॥ ಗಗನ ಮೇಲ್ಗಟ್ಟು ಸಂಕ್ರಮಣಗಳೆ ಬಡ ವುಗಳೂ । ಭಗವಂತಗುಪಬರ್ಹಣಗಳುಷಡೃತುಗಳೆಂದೂ ॥ ೫ ॥ ನಾಗ ವಲ್ಲೆಗಳೆ ದಿವಸಗಳು ಕರಣವೇ ಕ್ರಮುಕೆ । ಯೋಗಗಳೆ ಚೂರ್ಣ ರಾತ್ರಿ ಕಾಂಶೂಕ ॥ ಭೋಗವತಿಜಲವೆ ಗಂಡೂಷೋದಕ ಶುದ್ಧ । ಸಾಗರವೆ ಪಾದೋದಕ ವಿರಾಡ್ರೂಪಗೆಂದ ॥ ೬ ॥ ಶಾತಕುಂಭೋಧರಾಂಡಾಂತ ಸ್ಥರಾಜ ಪಂ । ಪ್ರೀತಿಯಿಂದಲಿ ಯಜಿಸಿ ಮೋದಿಪನರಾ ॥ ವೀತಶೋ ಕರ ಮಾಡಿ ಸಂತೈಸುತಿಹ ಜಗ । ನ್ನಾಥವಿಟ್ಠಲ ಒಲಿದು ಸರ್ವಕಾಲಗ ಳಲ್ಲೀ ॥ ೭ ॥ ಶ್ರೀಃ ॥

೧೦೭. ರಾಗ ಮೋಹನ, ತ್ರಿಪುಟತಾಳ.

ಕಂಡೆ ಪಂಡರಿರಾಯನಾ । ಶ್ರೀಮನಪ್ರಿಯನಾ ॥ ಪಲ್ಲ ॥ ಚಂಡವಿಕ್ರಮ ಕರಮುನಿಪಗೊಲಿದಂಡಜಾಧಿಪ ಪ್ರಕಾಂಡಾಸುಪೀಠನೇ ॥ ಅನುಪಲ್ಲ ॥ ಮಣಿಮಯ ಮಕುಟಮಧುಪನ ವಿರಾಸ್ಯರೇ । ಫಣೆಯೊಳಿಟ್ಟ ಕಸ್ತೂರಿ ತಿಲಕ । ವನರುಹ ಉಪಮ ಲೋಚನಯುಗ ಚಂಪಕ ॥ ಸುನಾಸ ಕುಂ ಡಲವ । ವಿಕಾಸವ ಕದಪಿನ ವಿಲಾಸವ । ಮೊಗದ ಮಂದಹಾಸವ ॥ ೧ ॥ ಕುಂದ ಕೋರಕ ದಶನಾವಳಿಯ । ಚಂದದಿ ಪೊಳೆವ ಅಧರ ಕಲೆಯ । ಕಂಧರತ್ರಿವಳಿ ಪುರಂದರ ॥ ಇಭಕರಪೋಲುವ । ಭುಜಯುಗ ವಿಶಾಲವ । ಕರತಳದ ಸಾಲವ । ನಖರಮಲ್ಲಿಕಾಸವ ॥ ೨ ॥ ಅತಿವಿಸ್ತೃತವಕ್ಷಸ್ಥಳವ ಸಿರಿ । ಪತಿ ಶದನಾರ್ಕದಂದದಿ ಪೊಳೆವ । ರತುನಕೌಸ್ತುಭದೀಧಿತಿವಿಲ ಸಿತ ॥ ವೈಜಯಂತಿಯ । ಉದರರೋಮಪಂಕ್ತಿಯ । ನಾಭಿವಲ್ಲಿಕದಂ ತಿಯ । ಕುಕ್ಷಿತ್ರಿವಳಿಶಾಂತಿಯ ॥ ೩ ॥ ಮುಂಬಿಸಿಲಂತೆ ಕನಕಚೇಲಾ । ಸುನಿತಂಬದಿ ಪೊಳೆವ ಗೋಲಿಯ ಚೇಲಾ ॥ ಕಂಬು ಕೋಕನದ ವಿಡಂಬ

ಮೇಖಲಬಳಕಕಂಬವ । ಊರು ಕದಳೀ ಜಾನುಗಳಿಂದ ಬಿಂಬವ । ಅಜ ರಿಪ ವಿಡಂಬವ ॥ ೪ ॥ ಮಾತಂಗಕರದ ಜಂಘೆಗಳ । ಗುಲ್ಫ । ಜಾತಿಮಣಿ ಕಾಂಗುಲಿ ಜಂಘೆಗಳ। ಜ್ಯೋತಿ ಬೆಳಗೆ ಜಗನ್ನಾಥವಿಠಲ ॥ ನಂಘ್ರಿಪುಷ್ಕರ ಉದಿತಶತಭಾಸ್ಕರ । ಗಭಸ್ತಿತಿರಸ್ಕರ ಸುಜನರಿಗೆ ಶ್ರೇಯಸ್ಕರ ॥ ೫ ॥

೧೦೮. ರಾಗ ಆನಂದಭೈರವಿ, ಅಟತಾಳ.

ಮದಮತ್ಸರವ ಬಿಡದನಕಾ । ವಿಧ । ವಿಧದ ಸಾಧನದಿನ ದಿನಮಾಡ ಲೇನೋ ॥ ಪಲ್ಲ ॥ ವೇದಶಾಸ್ತ್ರಗಳೋದಲೇನು । ಗಂಗಾ । ಗೋದಾವರಿ ಯಲಿ ಸ್ನಾನವ ಮಾಡಲೇನು ॥ ಸಾಧುಕರ್ಮವಾಚರಿಸೇನು । ವಿಷ್ಣು । ಪಾದದಿ ಪಿಂಡದಾನವ ಮಾಡಲೇನೂ ॥ ೧ ॥ ಸನ್ಯಾಸಾಶ್ರಮ ಧರಿಸ ಲೇನೂ । ಗೋಹಿ । ರಣ್ಯಾದಿಗಳಲಿ ಮಮತೆ ಬಿಟ್ಟರೇನು ॥ ಪುಣ್ಯ ಕ್ಷೇತ್ರಕೆ ಪೋಗಲೇನು । ಅನ್ನ । ಕನ್ಯಾದಿದ್ರವ್ಯದಾನವ ಮಾಡಲೇನೂ ॥ ॥ ೨ ॥ ಪಾಪಕರ್ಮವ ತೊರದರೇನು । ಲಕ್ಷ । ದೀಪಾರಾಧನೆ ದಿನದಿನ ಮಾಡಲೇನೂ ॥ ಶಾಪಾನುಗ್ರಹಶಕ್ತಿಯಿದ್ದೇನು । ಪೂಜಾ । ಸೋಪಸ್ಕರ ಬಹುತರವಿರಲೇನೂ ॥ ೩ ॥ ಶ್ವಾಸನಿರೋಧಿಸಲೇನು । ಪಕ್ಷ । ಮಾಸೋಕ್ತಧರ್ಮಕರ್ಮವ ಮಾಡಲೇನು ॥ ಆಸನ ಜಯ ಸಂಪಾದಿಸಲೇನು । ಉಪ । ವಾಸವ್ರತದಿ ದೇಹ ಬಳಲಿಸಲೇನು ॥ ೪ ॥ ಜ್ಯೋತಿಷ್ಟೋಮವ ಮಾಡಲೇನು । ಲಕ್ಷ । ಶ್ರೀತುಳಸಿಪುಷ್ಪವರ್ಪಿಸಲೇನು ॥ ಭೂತದಯವು ಇದ್ದರೇನು । ಜಗ । ನ್ನಾಥವಿಠಲನಂಘ್ರಿ ಪೊಂದಿದ್ದವರೊಳು ॥ ೫ ॥

✓೧೦೯. ರಾಗ ಕಾಂಬೋಧಿ, ಝುಂಪೆತಾಳ.

ಕರುಣಿಸೆನಗಿನಿತು ಕರುಣಾರ್ಣವನೆ ನಿನ್ನ । ಚರಣಾಬ್ಜದಲಿ ಭಕುತಿ ವಿಷಯದಿ ವಿರಕುತಿ ॥ ಪಲ್ಲ ॥ ಬಿಂಬನೇ ಸರ್ವಪ್ರಯೋಜನವ ಮಾಡಿ ಪ್ರತಿ । ಬಿಂಬರಿಗೆ ತತ್ಫಲಗಳೀವ ಕಾವಾ ॥ ಬಿಂಬನೆ ಸ್ವತಂತ್ರ ಪ್ರತಿ ಬಿಂಬಾಸ್ವತಂತ್ರತವು । ನೆಂಬ ಸುಜ್ಞಾನಪೂರ್ವಕ ನಿನ್ನ ಭಜಿಪ ಸುಖ ॥ ೧ ॥ ಕಾರ್ಯಕಾರಣ ಅಂಶಿ ಅಂಶಾವತಾರ ಅಂ ·। ತರ್ಯಾಮಿ ವ್ಯಾಪ್ಯ

ವ್ಯಾಪಕ ಪ್ರೇರಕ ॥ ಪ್ರೇರ್ಯ ಬಾಧಕ ಬಾಧ್ಯ ಪೋಷ್ಯ ಪೋಷಕರೂಪ। ಆರ್ಯರಿಂದರಿತು ಅನುದಿನದಿ ಸುಖಿಸುವ ಭಾಗ್ಯ ॥ ೨ ॥ ತಾರತಮ್ಯದ ಜ್ಞಾನ ದುರ್ವಿಷಯಗಳಲಿ ಸ। ದ್ವೈರಾಗ್ಯ ಹರಿದ್ವೇಷಿಗಳಲಿ ದ್ವೇಷಾ ॥ ಸೂರಿಗಳ ಸಂಗ ಗುಣರೂಪಕ್ರಿಯೆಗಳನು ಸುವಿ। ಚಾರಗಯ್ಯುತ ನಿತ್ಯ ಅನುಮೋದಬಡುವಂತೆ ॥ ೩ ॥ ಮಿಂದೋದಕಗಳೆಲ್ಲ ಮಜ್ಜನವು ದೇಹಾ ನು। ಬಂಧಿ ಜನರೆಲ್ಲ ನಿನ ಪರಿವಾರವು ॥ ನಿಂದ್ಯ ಕರ್ಮಗಳೆಲ್ಲ ಪಾದುಕ ಗಳೆಂಬ ಅನು । ಸಂಧಾನ ಮನಕೆ ನಿತ್ಯದಲಿ ಬರುವಂತೆ ॥ ೪ ॥ ಚೇತ ನಾಚೇತನಗಳೆರಡು ಪ್ರತಿಮೆಗಳು ಸಂ । ಪ್ರೀತಿಯಲಿ ಸಂರಕ್ಷಿಸುವದು ಪೂಜೆ ॥ ಈತನುವೆ ಸದನವೆಂದರಿತು ನಿತ್ಯದಿ ಜಗ। ನ್ನಾಥವಿಟ್ಠಲನುಂಬ ವಿಷಯುವೇ ಮಖವೆಂದು ॥ ೫ ॥ ಶ್ರೀಃ ॥

## ೧೧೦. ರಾಗ ಕಾಂಬೋಧಿ, ಝಂಪೆತಾಳ.

ಸಂತರೆನಬಹುದು ಸಜ್ಜನರಿವರನಾ। ಇಂಥಾ ಗುಣಗಳಿಂದ ಯುಕ್ತರಾ ಗಿಪ್ಪವರ ॥ ಪಲ್ಲ ॥ ಸ್ವಾಂತಸ್ಥಾನಂತ ಸರ್ವಾಂತರಾತ್ಮಕನೆಂದು । ಚಿಂತಿ ಸುತ ಮನದೊಳು ನಿರಂತರದಲಿ ॥ ನಿಂತಲ್ಲಿ ನಿಲ್ಲದೆ ದುರಂತಮಹಿಮನ ಗುಣವ। ಸಂಸ್ತುತಿಸುತನವರತ ಶಾಂತರಾಗಿಹರಾ ॥ ೧ ॥ ಲೇಸುಹೊಲ್ಲ ಗಳು ಪ್ರದ್ವೇಷಗೇಹಗಳು ಸಂ । ತೋಷಕ್ಲೇಶಗಳಿಗವಕಾಶ ಕೊಡದೆ ॥ ದೋಷವರ್ಜಿತ ಹೃಷೀಕೇಶ ಮಾಡುವನೆಂದು। ಭೇಶನಂದದಲಿ ಪ್ರಕಾ ಶಿಸುತಲಿಹರಾ ॥ ೨ ॥ ವೇದಶಾಸ್ತ್ರಂಗಳೊಳು ಮೇದಿನೀ ದಿವಿಜರೊಳು । ಸಾಧುಜನರೊಳು ಧರ್ಮಕರ್ಮಗಳೊಳು ॥ ಶ್ರೀದನೊಳು ಗೋವುಗಳೊ ಳಗೆ ದ್ವೇಷಿಪರಿಗೆ ಅ। ನ್ನೋದಕಗಳೀಯದೆ ನಿಷೇಧಗಯ್ಯುತಲಿಹರಾ ॥ ೩ ॥ ಯೆನ್ನ ಪೋಲುವ ಪತಿತರಜ್ಞಾನಿಗಳು ಜಗದೊ। ಳಿನ್ನಿಲ್ಲ ಪತಿತಪಾವನ ನೆನಿಸುವ ॥ ಜಾಹ್ನವೀಜನಕಗಿಂದಧಿಕರ್‍ಯಾರಿಲ್ಲೆಂದು । ಉನ್ನತೋತ್ಸಹ ದಿಂದ ಸನ್ನುತಿಸುತಿಪ್ಪವರ ॥ ೪ ॥ ಸತ್ಯಸಂಕಲ್ಪಯೇನಿತ್ತಿದ್ದೆ ಪರಮ ಸಂ। ಪತ್ತು ಯೆನಗೆನುತ ಸದ್ಭಕ್ತಿಯಿಂದಾ ॥ ನಿತ್ಯದಲಿ ಕೀರ್ತಿಸುತ ಪುತ್ರಮಿ ತ್ರಾದಿಗಳು ಭೃತ್ಯಾನುಭೃತ್ಯರೆಂದರ್ತಿಯಲಿ ಸ್ಮರಿಸುವರಾ ॥ ೫ ॥

ಜನುಮಜನುಮಗಳಲ್ಲಿ ಯೆನಗೆ ಜನನೀಜನಕ । ಅನುಜತನುಜಾಪ್ತ ಮೋದನ ಭೂಷಣಾ ॥ ಅನಿಮಿತ್ತಬಂಧು ಒಬ್ಬನೆ ಯೆನಿಸುತಿಪ್ಪ ಸ। ಜ್ಜನರಿಗಿಹಪರಸೌಖ್ಯರೂಪನೆಂಬುವರಾ ॥ ೬ ॥ ನಾಗೇಂದ್ರಶಯನ ಭವರೋಗಾಪಹರ್ತ ಪಾ। ಪೌಘಾದ್ರಿವಜ್ರ ಅಮೋಘಶೌರ್ಯ॥ ತ್ರೈಗುಣ್ಯವರ್ಜಿತ ಜಗನ್ನಾಥವಿಠಲಗೆ । ಕೂಗಿ ಕೈಮುಗಿದು ತಲೆಬಾಗಿ ನಮಿಸುವರಾ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ಕಾಂಬೋಧಿ, ಝಂಪೆತಾಳ.

ಆವ ಕಾರಣ ಮೊಗವ ತಿರುಗಿಹಿದ್ಯೋ ಪೇಳು। ಭೂವರಹ ಸ್ವಾಮಿಪುಷ್ಕರಣಿತೀರಗನೆ ॥ ಪಲ್ಲ ॥ ರಥಸಮೂಹಗಳೇರಿ ನೀ ಪ್ರಕಾಶಿಪ ಬಗೆಯೋ। ಸತಿಯ ಲಾವಣ್ಯಾತಿಶಯುವ ನೋಡುವ ಬಗೆಯೋ ॥ ಮಿತಿಯಿಲ್ಲದೆಸುರರ ಉಪೇಕ್ಷೆಮಾಡುವ ಬಗೆಯೋ। ಪತಿತಪಾವನ ಪೂರ್ಣಕಾಮ ನಿನಗೆ। ನುತಿಸಿ ಬಿನ್ನೈಸುವೆನು ಪೇಳೋ ಗುಣಧಾಮಾ ॥ ೧ ॥ ಭಜಕರೆನ್ನನು ಬಿಡರೆಂಬೋ ಮನಸಿನ ಬಗೆಯೋ । ಅಜಭವಾದಿಗಳ ಸಂಸ್ತುತಿಗಳಾಲಿಪ ಬಗೆಯೋ ॥ ರಜನೀಚರರ ಸದೆದು ನಾಟ್ಯವಾಡುವ ಬಗೆಯೋ। ಭುಜಗಭೂಷಣ ಪೂಜ್ಯಚರಣ। ತ್ರಿಜಗದ್ವಿಲಕ್ಷಣ ಸುರೂಪ ನಿರ್ಲೇಪಾ॥ ॥ ೨ ॥ ಅನುಗರೊಶ ನೀನಾದಡೆಮ್ಮನಮರವರೆಂದು । ವನತಿಗಾರರಿಯದಂತುಪದೇಶಿಸುವ ಬಗೆಯೋ ॥ ಘನಲಕ್ಷಣಮುಖಾಬ್ಜವನ ಚುಂಬಿಸುವ ಬಗೆಯೋ। ವನಜಸಂಭವನ ನಾಶಜನೆ ಜಗ। ಜ್ಜನಕ ಜಗನ್ನಾಥ ವಿಟ್ಠಲ ಕೃಪಾಸಾಂದ್ರಾ ॥ ೩ ॥ ಶ್ರೀಃ ॥

## ೧೧೨. ರಾಗ ಭೂಪಾಳಿ, ಝಂಪೆತಾಳ.

ಯಮುನೇ ದುರಿತೋಪಶಮನೇ ॥ ಪಲ್ಲ ॥ ಕುಮನ ಪರಿಹರಿಸು ಖಳ। ದಮನೆ ದಯವಂತೆ ॥ ಅನುಪಲ್ಲ ॥ ಶರಣೆಂಬೆ ತವ ಪದಾಂಬುರುಹಯುಗಳಿಗೆ ದಿವಾ । ಕರತನಯೆ ಸಪ್ತಸಾಗರಭೇದಿನೀ ॥ ಹರಿತೋಪಲಾಭೆ ಸುಂದರಿ ಸುಭಗೆ ನಿನ್ನ ಸಂ। ದರುಶನಕೆ ಬಂದ ಭಕ್ತರ ಪಾಲಿಪುದು

ಜನನೀ ॥ ೧ ॥ ಮಕರಾದಿ ಮಾಸದಲಿ ವಿಖನಸಾವರ್ತದೇ । ಶಕೆ ಬಂದು ವಿಜ್ಞಾನ ಭಕುತಿಯಿಂದಾ ॥ ತ್ರಿಕರಣದ ಶುದ್ಧಿಯಲಿ ಸಕೃತಸ್ನಾನವ ಗೈಯೆ । ಸಕಲ ಸುಖವಿತ್ತು ದೇವಕಿಸುತನ ತೋರಿಸುವೆ ॥ ೨ ॥ ಕನಕ ಗರ್ಭಾವರ್ತವೆನಿಪ ದೇಶದಲಿ ಸ । ಜ್ಜನರ ಪಾಲಿಪೆನೆಂಬ ಅನುರಾಗದಿ ॥ ಪ್ರಣವಪಾದ್ಯಗೆ ವಿಮಲ ಮುನಿಯಂತೆ ನಿರುತ ಕುಂ । ಭಿಣಿಯೊಳಗೆ ಸರಸ್ವತೀದ್ಯುನದಿಯಂದದಿ ಮೆರೆದೆ ॥ ೩ ॥ ಜಮದಗ್ನಿಮುಖ್ಯಸಂಯಮಿ ಗಳನುದಿನದಿ ಆ । ಶ್ರಮವ ತ್ರಿವೇಣಿಸಂಗಮದಿ ರಚಿಸಿ ॥ ತಮತಮ್ಮೊಳಗೆ ರಮಾರಮಣ ದಾಮೋದರನ । ಸುಮಹಿಮೆಗಳನು ಪೊಗಳುತಮಿತ ಮೋದದಲಿಹರು ॥ ೪ ॥ ಪಿಂಗಳಾಧಿಷ್ಠಿತೆ ಶುಭಾಂಗಿ ಸುಮನವನಿತ್ತು । ಕಂಗೊಳಿಸು ಯೆನ್ನಂತರಂಗದಲ್ಲಿ ॥ ತುಂಗಸುಮಹಿಮ ಜಗನ್ನಾಥವಿಟ್ಠಲನ ಸ.. । ಣಂಗಳ ತುತಿಪುದಕೆ ಮಂಗಳಮತಿಯನೀಯೋ ॥ ೫ ॥

## ೧೧೩. ರಾಗ ಪೂರ್ವಿ, ಅಟತಾಳ.

ಯಮರಾಯ ಪೇಳ್ದ ದೂತರಿಗೇ । ಲಕ್ಷ್ಮೀ । ರಮಣನ ದಾಸರಿಪ್ಪೆಡೆಗೆ ಪೋಗದಿರೆಂದು ॥ ಯಮರಾಯ ॥ ಪಲ್ಲ ॥ ವೇದವ್ಯಾಕರಣ ಶಾಸ್ತ್ರಗ ಳೋದಿ ಶ್ರಾದ್ಧವೇ । ಕಾದಶೀದಿನದಿ ಮಾಡುತಲಿಪ್ಪರಾ ॥ ಭೇದಮತವ ಮಿಥ್ಯವೆನುತಲಿಪ್ಪ ಮಾಯ । ವಾದಿಗಳೆಳತಂದು ನರಕದೊಳಿಡಿರೆಂದು ॥ ॥ ೧ ॥ ತಿರಿಯಕ್ಪುಂಡ್ರವನಿಟ್ಟು ಭಸ್ಮ ದೇಹಕೆ ಪಟ್ಟೆ । ಕೊರಳಿಗೆ ರುದ್ರಾಕ್ಷಿಸರವ ಕಟ್ಟೆ ॥ ಕುರಿಗಳ ಕೊಯ್ದು ಯಜ್ಞವ ಮಾಳ್ಪೆನೆನುತಲಿ । ಹರಿ ಹರರೊಂದೆಂಬರೆಳದು ತನ್ನಿರೆಂದು ॥ ೨ ॥ ಶಿವನೆ ತಾನೆಂದು ಜಾಹ್ನವಿ ತೀರದಲಿ ಪಾ । ರ್ಥಿವ ಲಿಂಗ ಪೂಜಿಪ ಅವಿವೇಕರಾ ॥ ಶಿವರಾತ್ರಿಗಳಲಿ ಆಹಾರ ಬಿಡುವರ ಉ । ರವ ನರಕದೋಳ್ಭವಣೆ ಬಿಡಿಸಿರೆಂದು ॥ ೩ ॥ ಮಳೆ ಛಳಿಬಿಸಿಲು ಕತ್ತಲೆಯೊಳು ಬರಲು ನ । ಮ್ಮಾಳಿಯದೊಳು ಸ್ಥಳವಿಲ್ಲೆಂ ಬರ ॥ ಕಳವಿಲವರ ದ್ರವ್ಯಗಳನಪಹರಿಸುವ । ಬಲು ನೀಚರ ಪಿಡಿದೆಳದು ತನ್ನಿರೋ ಯೆಂದು ॥ ೪ ॥ ಶ್ರೀತುಳಸಿಯ ಬಿಟ್ಟು ಹಲವು ಪುಷ್ಪದಿ ಜಗ । ನ್ನಾಥವಿಠಲನ ಪೂಜಿಸುತಿಪ್ಪರಾ ॥ ಯಾತನಾಡಿ ವೇದಮಂತ್ರ ಬಿಡುವರ । ಯಾತನದೇಹವ ಕೊಟ್ಟು ಬಾಧಿಸಿರೆಂದು ॥ ೫ ॥ ಶ್ರೀ ॥

## ೧೧೪. ರಾಗ ನಾಟಿ, ಝಂಪೆತಾಳ.

ಶರಣು ಮೃತ್ಯುಂಜಯ ಶರಣ್ಯ ಸಜ್ಜನರ ಭಯ । ಪರಿಹರಿಸು ಕರುಣಾಳು ಬಿನ್ನಪವ ಕೇಳೂ ॥ ಪಲ್ಲ ॥ ವಾಸವಾದ್ಯಮರನುತ ವನಜಸಂಭವನ ಸುತ । ನೀ ಸಲಹು ಕೈಲಾಸವಾಸ ಈಶಾ ॥ ಕ್ಲೇಶಪೋದಗಳ ಸಮ ತಿಳಿಸು ಅಶ್ವತ್ಥಾಮ । ಶ್ರೀಶುಕನೆ ದೂರ್ವಾಸ ಸ್ಫಟಿಕಸಮಭಾಸಾ ॥ ॥ ೧ ॥ ವೈಕಾರಿಕಾದಿ ತ್ರೀರೂಪ ನಿನ್ನಯ ಕೋಪ । ಶೋಕಕೊಡುವದು ದೈತ್ಯಜನಕೆ ನಿತ್ಯಾ ॥ ಲೌಕಿಕವೆಲ್ಲ ವೈದಿಕವಾಗಲೆನಗೆ ವೈ । ನಾಕಿ ಹೃತ್ಕುಮುದೇಂದು ಭಕತಜನ ಬಂಧೂ ॥ ೨ ॥ ಪವಮಾನತನಯ ನಿನ್ನವರಲ್ಲಿ ಕೊಡು ವಿನಯ । ದಿವಸದಿವಸಗಳಲ್ಲಿ ಯೆನ್ನಿರವ ಬಲ್ಲೀ ॥ ಪವನ ದ್ವಿತೀಯ ರೂಪ ಸತತ ಯೆನ್ನಯ ಪಾಪ । ಅವಲೋಕಿಸದಲೆನ್ನ ಸಲಹೋ ಸುರಮಾನ್ಯ ॥ ೩ ॥ ಶೇಷನಂದನ ಶೇಷಭೂಷಣನೆ ಸಶ್ರೇಷ । ದೋಷರಹಿತನ ತೋರೊ ಕರುಣವನೆ ಬೀರೋ ॥ ಶ್ರೀಷಣ್ಮುಖನ ತಂದೆ ಸತತ ನೀ ಗತಿಯೆಂದೇ । ಶೋಷಿಸು ಭವಾಮಯವ ಬೇಡುವೆನು ದಯವಾ ॥ ೪ ॥ ಗರ್ಗಮುನಿಕರಕಮಲಪೂಜ್ಯಚರಣಾಬ್ಜ ಮಮ । ದುರ್ಗುಣಗಳೆಣಿಸದಲೆ ಇಹದಿ ಸ್ವಾಮೀ ॥ ನಿರ್ಗತಾಶನ ಜಗನ್ನಾಥವಿಟ್ಠಲನ ಸ । ನ್ಮಾರ್ಗವನು ತೋರೊ ಈದೇಹ ನಿನ ತೇರೋ ॥ ೫ ॥ ಶ್ರೀಃ ॥

## ೧೧೫. ರಾಗ ಆನಂದಭೈರವಿ, ಆದಿತಾಳ.

ಶ್ರೀರಾಘವೇಂದ್ರಾ ಬಾರೋ । ಕಾರುಣ್ಯವಾರಿಧಿ ಬಾರೋ । ಆರಾಧಿಸುಭಕ್ತರಭೀಷ್ಟ । ಪೂರೈಸುವ ಪ್ರಭುವೆ ॥ ಪಲ್ಲ ॥ ರಾಜವಂಶೋದ್ಭವನ ಪಾದ । ರಾಜೀವಭೃಂಗನೆ ಬಾರೋ ॥ ರಾಜಾಧಿರಾಜರೊಳು ವಿ । ರಾಜಿಸುವ ಚೆಲುವ ॥ ೧ ॥ ವ್ಯಾಸರಾಯನೆನಿಸಿ ನೃಪನ । ಕ್ಲೇಶ ಕಳದವನೆ ಬಾರೋ ॥ ಶ್ರೀಸುಧೀಂದ್ರ ಕರಕಂಜಜ । ವಾಸುದೇವಾರ್ಚಕನೆ ॥ ೨ ॥ ಸನ್ಯಾಸಕುಲದೀಪ ಬಾರೋ । ಸನ್ನುತಸದ್ಗುಣನೆ ಬಾರೋ ॥ ಮಾನ್ಯಜಗನ್ನಾಥವಿಠಲ ಪ್ರ । ಪನ್ನಜನರ ಪ್ರಿಯನೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೧೬. ರಾಗ ಮಧ್ಯಮಾವತಿ, ಅಟತಾಳ.

ಕೃಷ್ಣದ್ವೈಪಾಯನ ಗುರುರಾಯ । ಮನೋ । ಭೀಷ್ಟದಾಯಕ ಕರುಣದಿ ಪಿಡಿ ಕಯ್ಯಾ ॥ ಪಲ್ಲ ॥ ರಾಮಕೃಷ್ಣ ಪವನಾತ್ಮಜ । ನಂಘ್ರಿ । ತಾಮರಸವ ಧೇನಿಸುವ ಪರಿವ್ರಾಜಾ ॥ ಭೀಮತೀರಪಿಪ್ಪಲ ಭೂಜಾ । ಮೂಲ । ಸೀಮೆಯೊಳಗೆ ರಾಜಿಸುವ ಯತಿರಾಜಾ ॥ ೧ ॥ ಭೇದಮತಾಂಬುಧಿ ಚಂದಿರಾ । ಗುರು । ವೇದವ್ಯಾಸಮುನಿವರ ಸುಕುಮಾರಾ ॥ ಸಾಧು ಸದ್ಗುಣಗಣಗಂಭೀರಾ । ನಾದ । ಬಾದರಾಯಣ ನಾಮದಲಿಪ್ಪ ಧೀರಾ ॥ ॥ ೨ ॥ ದೇವಜಗನ್ನಾಥವಿಠಲನ್ನ । ಪಾದ । ಸೇವಕ ಬೇಡುವೆ ಹರಿಮೂರ್ತಿಧ್ಯಾನ ॥ ಕೇವಲ ಭಕುತಿ ನಿರ್ಮಲಜ್ಞಾನ । ವಿತ್ತು । ಪಾವನ್ನಮಾಡಿ ಪಾಲಿಸೋ ಪ್ರತಿದಿನ ॥ ೩ ॥ ಶ್ರೀಃ ॥

### ೧೧೭. ರಾಗ ನಾಟಿ, ಝಂಪೆತಾಳ.

ನಮೊ ನಮೋ ಶ್ರೀರಾಘವೇಂದ್ರ ಸದ್ಗುಣಸಾಂದ್ರಾ । ಕಮಲನಾಭನ ದಾಸಕಮಲಾಪ್ತಭಾಸಾ ॥ ಪಲ್ಲ ॥ ದೇಶದೇಶಗಳಿಂದ ದೈನ್ಯದಿಂದಲಿ ಬಂದ । ಶೇಷಜನರಗಳನ್ನ ಸಲಹುವ ವಿಶಿಷ್ಟ ॥ ನಾ ಸೇರಿದೆನೊ ನಿನ್ನ ನಮಿತಜನರ ಪ್ರಸನ್ನ । ಭಾಸುರಸುಚರಿತ ಭಜಿಸುವೆನು ಅನವರತ ॥ ನಮೊ ನಮೋ ॥ ೧ ॥ ಭೇದಾರ್ಥ ಜಲಜಾರ್ಕ ಭೂರಿಬಲತರತರ್ಕ । ವಾದಿ ವೃಕ್ಷಕೆ ಕುಲಿಶ ವರಹ ಸುತೀವಾಸಾ ॥ ಬಾಧಿಸುವ ಅಘಜೀರ್ಣ ಮಾಡು ಗುರುವರ ಪೂರ್ಣ । ಬೋಧಮತಸಂಭೂತ ಭೂರಿಪ್ರಖ್ಯಾತಾ ॥ ನಮೊ ನಮೋ ॥ ೨ ॥ ನತಜನಾಶ್ರಯಪ್ರೀಯ ನೆರೆನಂಬಿದೆನೊ ಮಾಯ । ಮತ ಕದಳಿಗಜೇಂದ್ರವಿಬುಧಾಬ್ಧಿಚಂದ್ರಾ ॥ ಕ್ರತುಭುಕು ಜಗನ್ನಾಥವಿಠಲನ ನಿಜದೂತ । ಸ್ತುತಿಸಲಾಪೆನೆ ನಿನ್ನ ಯತಿಶಿರೋರನ್ನಾ । ನಮೊ ನಮೋ ॥ ೩ ॥ ಶ್ರೀಃ ॥

### ೧೧೮. ರಾಗ ಕಾಂಬೋಧಿ, ಝಂಪೆತಾಳ.

ದ್ವಾರಪಾಲಕರಿಗಾನಮಿಪೆ ನಿತ್ಯಾ । ಶ್ರೀರಮಣ ನಾರಾಯಣನ ಪುರತ್ರಯದೊಳಿಹ ॥ ದ್ವಾರಪಾಲಕರಿಗಾನಮಿಪೆ ನಿತ್ಯಾ ॥ ಪಲ್ಲ ॥ ಜಯ

ವಿಜಯ ಬಲಪ್ರಬಲ ಚಂಡಪ್ರಚಂಡ ನಿ । ರ್ಭಯನಂದ ಸುನಂದ ಕುಮುದ ಕುಮುದಾ ॥ ನಯನ ಭದ್ರ ಸುಭದ್ರ ಧಾಮ ಸುಧಾಮ ಸಂ । ಪ್ರಿಯತಮನ ಆಜ್ಞಾಧಾರಕರೆಂದೆನಿಸುವಾ ॥ ೧ ॥ ಲಸದೂರ್ಧ್ವ ಪುಂಡ್ರದ್ವಾದಶನಾಮ ಶಂಖ ಸುದ । ರುಶನ ಸುಗದಾಪದ್ಮ ನಾಮ ಮುದ್ರಾ ॥ ಬಿಸಜಾಕ್ಷ ಶ್ರೀತುಳಸಿ ಕುಸುಮಮಾಲಿಕೆ ಧರಿಸಿ । ನಸುನಗು ತಲ್ಯಹರ್ನಿಶಿಗಳಲಿ ಹರಿಯ ತುತಿಪಾ ॥ ೨ ॥ ಮಣಿಮಯ ಕಿರೀಟಕುಂಡಲ ಹಾರಪದಕ ಕಂ । ಕಣನಡುವಿನೊಡ್ಯಾಣ ಪೀತಾಂಬರ ॥ ಕ್ವಣಿತ ನೂಪುರಗೆಜ್ಜೆ ಚರಣಾಭರಣ ಸುಲ । ಕ್ಷಣರಾದ ಸರ್ವಾಂಗಸುಂದರರೆನಿಸುವಾ ॥ ೩ ॥ ಕರದೊಳೊಪ್ಪುವ ಗದಾಯುಧ ಕುಂದರದನ ಕ । ಸ್ತೂರಿ ನಾಮಮಾಣಿಕಕ್ಷತೆಯ ಧರಿಸಿ ॥ ಪರಿಮಳಿಪ ಕುಸುಮಕೇಸರಿ ಗಂಧದಿಂ ಭಯಂ । ಕರರಾಗಿ ತೋರುವರು ನೊಳ್ಪರಿಗೆ ನಿತ್ಯಾ ॥ ೪ ॥ ಮೂರು ಬಾಗಿಲಲಿ ಶ್ರೀದೇವಿಯಿಪ್ಪಳು ವಾಯು । ಭಾರತೀ ಆಜ್ಞದಿಂದೀದೇವರು ॥ ವೀರಜಯ ವಿಜಯಾದಿಗಳಿಗೆ ವಿಷ್ವಕ್ಸೇನ । ಪ್ರೇರಕನು ತಾನಾಗಿ ಶ್ರೀಶನರ್ಚಿಪನೂ ॥ ೫ ॥ ಹೃದಯ ಶ್ರೋತ್ರಚಕ್ಷುವದನಾದಿ ಕರಣದೊಳು । ನದನದಿಗಳೊಳು ಮಹೋದಧಿಗಳೊಳಗೆ ॥ ಉದಿತಭಾಸ್ಕರ ಮಂಡಲದಿ ದೇವಗೃಹದಿ । ಸದಸದ್ವಿಲಕ್ಷಣ ಸುದತಿಸಹಪೂಜಿಸುವ ॥ ೬ ॥ ದ್ರುಹಿಣ ಮೊದಲಾದ ಸುಮನಸಪೂಜ್ಯಚರಣಾಬ್ಜ । ಮಹಿಮಮಂಗಳಚರಿತ ಸುಗುಣಭರಿತಾ ॥ ಅಹಿರಾಜಶಯನ ಜಗನ್ನಾಥವಿಠಲನ ಸ । ನ್ಮಹಿಮೆಗಳ ತಿಳಿಸಿ ತೋರಿಸಲಿ ಮನ್ಮನದೀ ॥ ೭ ॥ ಶ್ರೀಃ ॥

## ೧೧೯. ರಾಗ ಕಾಂಬೋಧಿ, ಝಂಪೆತಾಳ.

ವಂದಿಸುವೆ ಗುರುರಾಘವೇಂದ್ರಾರ್ಯರಾ । ವೃಂದಾವನ ಪ್ರತೀಕದಿ ಪ್ರತಿದಿವಸಗಳಲಿ ॥ ವಂದಿಸುವೆ ಗುರುರಾಘವೇಂದ್ರಾರ್ಯರಾ ॥ ಪಲ್ಲ ॥ ಸುವಿರೋಧಿವತ್ಸರ ಶ್ರಾವಣ ಪರ ದ್ವಿತೀಯ । ಕವಿವಾರ ತುಂಗಭದ್ರಾತೀರದಾ ॥ ನವಸುಮಂತ್ರಾಲಯದಿ ದೇಹವನು ಬಿಟ್ಟು ಮಾ । ಧವನ ಪುರಕೈದಿದ ಮಹಾತ್ಮರಿವರೆಂದು ॥ ೧ ॥ ಸ್ವಪದಾವಲಂಬಿಗಳಿಗುಪನಿಷತ್

ಖಂಡಾರ್ಥ । ಉಪದೇಶಗಯ್ದು ಕಾಶ್ಯಪಿಸುರರನಾ ॥ ಪ್ರಪುನೀತರನ ಮಾಡಿ ಅಪವರ್ಗದಾಸರೊ । ಉಪಮೆರಿಂದರುಪಿಸಿದ ಉಪಕಾರಿಗಳ ಕಂಡೂ ॥ ೨ ॥ ದೇವತೆಗಳಿವರಿದಕೆ ಸಂದೇಹವಿಲ್ಲ ವೃಂ । ದಾವನವ ರಚಿಸಿ ಪೂಜಿಪ ಭಕ್ತರಾ ॥ ಸೇವೆ ಕೈಕೊಂಡು ಕೊಡುವರು ಮನೋರಥವ ಲ । ಕ್ಷ್ಮೀವರ ಜಗನ್ನಾಥವಿಠಲ ಪ್ರಿಯರೆಂದೂ ॥ ೩ ॥ ಶ್ರೀಃ ॥

೧೨೦. ರಾಗ ಕಾಂಬೋಧಿ, ಝಂಪೆತಾಳ.

ಕೃತಕೃತ್ಯನಾದೆನಿಂದಿನ ದಿನದೊಳು । ಕ್ಷಿತಿಸುತ ವೆಂಕಟರಾಮಾರ್ಯರನ ಕಂಡೂ ॥ ಪಲ್ಲ ॥ ಭೂಮಂಡಲದೊಳುಳ್ಳ ಸಕಲತೀರ್ಥಸ್ನಾನ । ಹೇಮಾದ್ರಿಮೊದಲಾದ ಕ್ಷೇತ್ರಯಾತ್ರೇ ॥ ನೇಮಜಪತಪವ್ರತಾದಿಗಳ ಮಾಡಿಗ ಪುಣ್ಯ । ಈಮಹಾತ್ಮರ ಕಂಡಮಾತ್ರ ಸಮನಿಸಿತೂ ॥ ೧ ॥ ಷಣ್ಣವತ್ಯಬ್ದ ಪರಿಯಂತ ಹರಿಮಹಿಮೆಗಳ । ಸನ್ನುತಿಯಲೀ ಶ್ರುತಿಸ್ಮೃತಿಗಳಿಂದಾ ॥ ಧನ್ಯರೆಂದೆನಿಸಿ ಮಹಿಯೊಳಗೆ ಪೂರಿತರಾದ । ಪುಣ್ಯಚರಿತರ ದಿವ್ಯ ಪಾದವನೆ ನಾ ಕಂಡೂ ॥ ೨ ॥ ಹೀನಜನರೇ ಬಹಳ ಕ್ಷೋಣಿಯ ಮೇಲೆ ಸು । ಜ್ಞಾನಿಗಳು ದುರ್ಲಭರು ಕಲಿಯುಗದಲಿ ॥ ಆನತೇಷ್ಟಪ್ರದಾ ಜಗನ್ನಾಥವಿಠಲ । ತಾನೆ ಕರತಂದು ತೋರಿ ಪುನೀತನ ಮಾಡ್ದ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೨೧. ರಾಗ ಬಿಲಹರಿ, ಝಂಪೆತಾಳ.

ಶ್ರೀರಂಗದರು ವ್ಯಾಸತತ್ವಜ್ಞರಿಂದು । ಪುರುಷೋತ್ತಮನ ಗುಣಗಳರುಪಿ ಸುಜನರಿಗೆ ॥ ಪಲ್ಲ ॥ ವರರೌದ್ರಿನಾಮಸಂವತ್ಸರ ಶ್ರಾವಣ । ಪರ ಪಕ್ಷ ಅಷ್ಟಮಿಭೌಮವಾರ ॥ ಭರಣಿ ನಕ್ಷತ್ರ ಪ್ರಾತಃಕಾಲದಲಿ ಸೋಮ । ಪುರದಿ ಗೋಪಾಲಕೃಷ್ಣನ ಪಾದ ಸನ್ನಿಧಿಗೇ ॥ ೧ ॥ ವೇದಾಬ್ಜಭವಸೂತ್ರ ಭಾಷ್ಯಭಾಗವತಮೊದ । ಲಾದ ಶಾಸ್ತ್ರಗಳ ಕೀರ್ತನೆಗೈಯುತಾ ॥ ಪಾದೋದಕವ ಶಿರದಿ ಧರಿಸುತಿಪ್ಪವರಘ ತಿ । ರೋಧಾನಗೈಸಿ ಪರಗತಿ ಮಾರ್ಗವನುತೋರಿ ॥ ೨ ॥ ಸೋಜಿಗವಿದಲ್ಲ ಸಜ್ಜನರನುದ್ಧರಿಸುವದು ।

ನೈಜ ಜಗನ್ನಾಥವಿಟ್ಠಲನ ಪಾದ ॥ ರಾಜೀವಯುಗಳ ನಿರ್ವ್ಯಾಜದಲಿ ಭಜಿಪ ಪ್ರ । ಯೋಜನವನೊರದಿತರವ್ಯಾಪಾರಗಳ ತೊರೆದೂ ॥ ೩ ॥

### ೧೨೨. ರಾಗ ಭೂಪಾಳಿ, ಝಂಪೆತಾಳ.

ಜನನಿ ಜಾಹ್ನವಿ ಜಗತ್ರಯ ಪಾವನಿ । ಪ್ರಣತಕಾಮದೆ ಪದ್ಮಜಾಂಡ ಸಂಭೂತೇ ॥ ಪಲ್ಲ ॥ ಸೃಷ್ಟೀಶಪದಜಾತೆ ವಿಶ್ವಮಂಗಳ ಮಹೋ । ತ್ಕೃಷ್ಟ ತೀರ್ಥಗಳೊಳುತ್ತಮಳೆನಿಸುವೇ ॥ ಕಷ್ಟವರ್ಜಿತವೆನಿಪ ತ್ರಿಪಥಗಾಮಿನಿ ದಯಾ । ದೃಷ್ಟಿಯಿಂದಲಿ ನೋಡು ಪ್ರತಿದಿನದಿ ಯೆನ್ನಾ ॥ ಜನನಿ ॥ ೧ ॥ ಕರ್ಕರಾಶಿಗೆ ಕರ್ಮಸಾಕ್ಷಿಯೆಂದೆನಿಸುತಿಹ । ಅರ್ಕದೇವನು ಬಂದ ಸಮಯದಲ್ಲಿ ॥ ಶರ್ಕರಾಹ್ವರು ಸ್ನಾನಗೈಯೆ ದುರಿತಗಳು ಸಂ । ಪರ್ಕವಾಗದ ತೆರದಿ ಸಂತೈಪೆ ದಯದೀ ॥ ಜನನಿ ॥ ೨ ॥ ಕಾರುಣಿಕೆ ಬಿ[illegible]ಾವತರಣದಿಂದ ನೀ ಪೊರಟು । ವಾರಾಹಿಯೊಡಗೂಡಿ ಭಕ್ತಜನರ ॥ ಪ್ರಾರಬ್ಧಕರ್ಮಗಳನುಣಿಸಿ ಮುಕ್ತರ ಮಾಳ್ಪೆ । ದೂರಗೈಸುವೆ ಸಂಚಿತಾಗಾಮಿಗಳನೂ ॥ ಜನನಿ ॥ ೩ ॥ ನಂದಿನೀ ನಳಿನೀ ಸುಶೀತಾಮಲಾಪಹರ । ಕೆಂದವಮಾತ್ರದಿ ಪುನೀತರನು ಮಾಳ್ಪೆ ॥ ಸಂದರುಶನ ಸ್ಪರುಶನ ಸ್ನಾನಗಳ ಫಲ ಪು । ರಂದರಾರ್ಯರಿಗೆ ಬಲ್ಲರಲ್ಪರು ಅರಿಯರು ॥ ಜನನಿ ॥ ೪ ॥ ಮಾತೆ ವಿಜ್ಞಾಪಿಸುವೆ ಬಿನ್ನಪವ ಕೇಳು ಸಂ । ಪ್ರೀತಿಯಿಂದಲಿ ಕರುಣಿಸೆನಗೆ ಇದನೆ ॥ ಶ್ರೋತವ್ಯ ವಕ್ತವ್ಯ ಮಂತವ್ಯ ಸ್ತವ್ಯ ಜಗ । ನ್ನಾಥವಿಟ್ಠಲನೊಬ್ಬನೆಂದು ತಿಳಿವಂತೇ ॥ ಜನನಿ ॥ ೫ ॥ ಶ್ರೀಃ ॥

### ೧೨೩. ರಾಗ ಸಾವೇರಿ, ಝಂಪೆತಾಳ.

ಇನಿತೆಂದು ಶಾಸ್ತ್ರಪೇಳುವವು ಪುನಹ । ಪುನಹ ಭಗವತ್ಪ್ರಾಪ್ತಿ ಬೇಕೆಂಬವರಿಗೆ ॥ ಪಲ್ಲ ॥ ಅನುಬಂಧಿಗಳಲಿ ಮಮತೆಯನೆ ಬಿಡು ವಿಷಯವಾ । ಸನೆಯ ನೀಡಾಡು ಸುಜ್ಞಾನಭಕ್ತಿಯ ಬೇಡು । ಮನದಲ್ಲಿ ಹರಿಯಮೂರ್ತಿಯನೆ ನೆರೆ ನೋಡು ಸು । ಜ್ಞರನು ಕೊಂಡಾಡು ಅಜ್ಞಾನಿಗಳ ಸಹವಾಸ ಸುಡು । ವನಜನಾಭನ ಪೂಜೆಮಾಡು ಪ್ರತಿ । ಕ್ಷಣಬಿಡದೆ ಭಗವದ್ಗುಣಗಳ

ಕೊಂಡಾಡು ॥ ೧ ॥ ಪರಮಾಣುವೊದಲ್ಗೊಂಡವ್ಯಕ್ತತತ್ವದೊಳ । ಹೊರಗೆ ವ್ಯಾಪಕನಾಗಿ ತದ್ರೂಪನಾಮದಿಂ । ಕರಪ ತಲಿ ತದ್ವಿಕಾರಗಳ ಲ್ಲದಲೆ ಸೃಷ್ಟಿ ॥ ಪರಿಪಾಲನೆ ವ್ಯಯಗಳನೆ ಮಾಡಿ ಮೋದಿಸುತಾ । ಪರ ಮಾತ್ಮನೊಬ್ಬನಿಹನೆಂದು ಹರಿಗೆ । ಮರಿಯದಲೆ ಮಹಿಮೆಗಳ ಪೊಗಳು ತಿರು ಮನುಜಾ ॥ ೨ ॥ ಹರಿಭಕ್ತರಿದ್ದೆಡೆಗೆ ಹರಿದು ಹೋಗಲುಬೇಕು । ತಿರಿಯಕ್ಪುಂಡ್ರಧಾರಿಗಳ ನಿಂದಿಸಬೇಕು । ಹರಿಯ ನಾಮತ್ರಯಾಂಕಿತ ರಿಗೆರಗಲು ಬೇಕು ॥ ಗುರುಹಿರಿಯರವಗುಣಗಳೆಣಿಸದಿರಬೇಕು ಮ । ತ್ಸರವ ಬಿಡಬೇಕು ಭಕ್ತರಲಿ ಹೀಗೆ । ವರದೊರದು ಪೇಳುವರು ಬುಧರು ನಿತ್ಯದಲಿ ॥ ೩ ॥ ನಿತ್ಯನೈಮಿತ್ತಿಕ ಸುಕರ್ಮ ಮಾಡಲುಬೇಕು । ಕೃತ್ಯ ವಲ್ಲದೆ ಲೋಕವಾರ್ತೆಗಳ ಬಿಡಬೇಕು । ಚಿತ್ತದಲಿ ಹರಿಪಾದ ಚಿಂತಿಸು ತಲಿರಬೇಕು ॥ ವಿತ್ತದೇಹಾಗಾರ ಭಗವಂತನದೆಂದು ದೇ। ಹತ್ಯಾಗ ಪರಿ ಯಂತ ಮಾಳ್ಪ ಕರ್ಮ । ಸತ್ಯಸಂಕಲ್ಪಕಿವು ಪೂಜೆ ಯೆನಬೇಕು ॥ ೪ ॥ ಶೀತೋಷ್ಣ ಸುಖದುಃಖ ಮಾನಾಪಮಾನ ಜಯ । ಭೀತಿ ನಿರ್ಭೀತಿ ಅಪಜಯ ಜ್ವರಾಪಸ್ಮಾರ । ಭೂತಬಾಲಗ್ರಹ ಮೃಗ ಸರ್ಪ ನೃಪ ಚೋರ ॥ ಯಾತನೆಗೆ ಭಯಪಡದೆ ಸರ್ವತ್ರದಲಿ ಜಗ । ನ್ನಾಥವಿಠಲನ ಸ್ಮರಿಸುತಿರು ಮಹಾ । ಪಾತಕವ ಪರಿಹರಿಸಿ ಪೊರೆವ ದಯದಿಂದಾ ॥ ೫ ॥

೧೨೪. ರಾಗ ಕಾಂಬೋಧಿ, ಝಂಪೆತಾಳ.

ವರದೆ ಕಾರುಣ್ಯ ಶರಧೇ । ಕರದೆನ್ನ ತವ ಸನ್ನಿಧಿಯಲಿಟ್ಟು ಪೊರದೇ ॥ ॥ ಪಲ್ಲ ॥ ವರದೇ ವರದೆ ಯೆಂದು ಕರದ ಮಾತ್ರದಲಿ ವಾ । ಗ್ದುರಿತಗಳ ಪರಿಹರಿಸಿ ಪೊರವೆ ನೀನೂ ॥ ಕರಣಶುದ್ಧಿಯಲಿ ಸಂದರುಶನಭಿವಾದ ನವ । ವಿರಚಿಸುವ ಮಾನವಗೆ ಪರಮ ಸೌಖ್ಯವನೀವೇ ॥ ೧ ॥ ಸ್ನಾನ ಸಂಧ್ಯಾನ ಜಪಧ್ಯಾನಾರ್ಚನೆಯ ಮಾಳ್ಪ । ಮಾನವರಿಗನುದಿನದಲೇನು ಫಲವೋ ॥ ಸಾನುರಾಗದಿ ವೊಲಿದು ನೀನಿತ್ತು ಪಾಲಿಸಿದೆ । ಆನರಿಯೆ ವಾರಿನಿಧಿರಾಣಿ ಕಲ್ಯಾಣೀ ॥ ೨ ॥ ಕರುಣಿಸೆನಗಿದನೆ ವರ ವರವ ಬೇಡುವೆ ನಿನಗೆ । ಹರಿಗುರುಗಳಲಿ ಭಕುತಿ ಪರಮ ಜ್ಞಾನ ॥ ಮರುತಾಂತರಾತ್ಮಕ ಜಗನ್ನಾಥವಿಠಲ ಒಂ । ಧರೆಪಳಿಗೆ ಬಿಡದೆ ಪೊಂದಿರಲಿ ಮನ್ಮನದೀ । ೩ ॥

೧೨೫. ರಾಗ ಭೈರವಿ, ಅಟತಾಳ.

ಪ್ರತಿಗಾಣೆ ನಿಮ್ಮ ಮಹಿಮೆಗೆ ಸತ್ಯಬೋಧ । ಯತಿಕುಲವರನೆ ನಿತ್ಯ ॥ ॥ ಪಲ್ಲ ॥ ತುತಿಸಿ ವಂದಿಸುವ ತಾವಕರೊಳ ಗಣಿಸೋ ಅ । ರ್ಥಿತಜನ ಚಿಂತಾಮಣಿ । ಸತ್ಕರುಣೀ ॥ ಅನುಪಲ್ಲ ॥ ಶ್ರೀನಿವಾಸನ ಗುಣ ಸಾನುರಾಗದಲಿ ವ್ಯಾ । ಖ್ಯಾನಪೇಳುವ ಕಾಲದಿ ॥ ಶ್ವಾನರೂಪದಿ ಪವಮಾನ ಜನರ ಮುಂದೆ । ಕಾಣಿಸಿಕೊಂಡನಂದು । ತಾ ಬಂದೂ ॥ ೧ ॥ ಬವರಗೋಸುಗ ಬಂದ ಯುವನಾಧಿಪತಿ ನಿಮ್ಮ । ಸುವಿಚಿತ್ರಮಹಿಮೆ ಕಂಡೂ ॥ ಪ್ರವಿತತನಾಗಿ ಕಪ್ಪವ ಕೊಟ್ಟು ನಮಿಸಿದ । ಕವಿ ಅಲವವಿಭವಾ । ಸುಭವಾ ॥ ೨ ॥ ಇವರು ದೇವಾಂಶರೆಂದರುಪುವಗೋಸುಗ । ದಿವಿಜತರಂಗಿಣಿಯು ॥ ಶಿವನಂಗಭೂರುಹ ಮೂಲಭಾಗದಲಿ ಉ । ದ್ಭವಿಸಿ ಕಂಗೊಳಿಸಿದ್ದಳೂ । ಕೃಪಾಳೂ ॥ ೩ ॥ ಸ್ವಾಂತಸ್ಥ ಮುಖ್ಯಪ್ರಾಣಾಂತರಾತ್ಮಕ ಭಗ । ವಂತನಂಘ್ರಿಕಮಲಾ ॥ ಸಂತತ ಸರ್ವತ್ರ ಚಿಂತಿಸುತಿಪ್ಪ ಮು । ಹಂತರಿಗೇನಚರಾ । ವಿಚಾರಾ ॥ ೪ ॥ ಮರುತಮತಾಬ್ಧಿಚಂದಿರ ಚಾರುಚರಿತ ಭೂ । ಸುರವರಸನ್ನುತನೇ ॥ ಪರಮಪುರುಷ ಜಗನ್ನಾಥವಿಠಲ ನಿಮ್ಮ । ಪರಿಪರಿ ಮಹಿಮೆ ಯೆಲ್ಲಾ । ತಾ ಬಲ್ಲಾ ॥ ೫ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

✓೧೨೬. ರಾಗ ಮುಖಾರಿ, ಝಂಪೆತಾಳ.

ತ್ರಾಣಿ ಶ್ರೀಕೃಷ್ಣವೇಣೀ । ಪ್ರಾಣಪತಿಪದಕಮಲ ಕಾಣಿಸು ಹೃದಯದಿ ಸ । ತ್ರಾಣಿ ಶ್ರೀಕೃಷ್ಣವೇಣೀ ॥ ಪಲ್ಲ ॥ ಯಮಧರ್ಮತನಯೆ ಶ್ರೀಕೃಷ್ಣನಂಗದಿ ಜನಿಸಿ । ಕಮಲಸಂಭವನ ಲೋಕದಲಿ ಮೆರದೆ ॥ ಸುಮನಸರ ನುಡಿಗೇಳಿ ಲೋಕಗಳ ದುರಿತೋಪ । ಶಮನಗೈಸಲು ಬಂದೆ ತುಮುಲಹರುಷದಲಿ ॥ ೧ ॥ ಭೂತನಾಥನ ಜಟಾಜೂಟದಿಂದು ದ್ಭವಿಸಿ । ಶ್ವೇತಪಿಂಗಳ ಶೈಲಶಿಖರಕಿಳಿದೇ ॥ ಭೂತಳಕೆ ಭೂಷಣಳೆನಿಸಿ ಪೂರ್ವವನಧಿ ನಿ । ಕೇತನವನೈದಿ ಸುಖಿಸಿದಿ ನಿನ್ನ ಪತಿಯೊಡನೇ ॥ ೨ ॥ ಪ್ರಾಣಿಗಳು ನಿನ್ನ ಜಲಪಾನವನು ಗೈಯೆ ನಿ । ತ್ರಾಣಸಂಹಾರ ವ್ಯಾಧಿಗೆ

ಭೇಷಜಾ ॥ ಪ್ರಾಣಪ್ರಯಾಣಪಾಥೇಯವೆಂದರಿಯೆ ನಿ । ರ್ವಾಣಪದ ವಿತ್ತು ಕಲ್ಯಾಣವಂತರ ಮಾಳ್ಪೇ ॥ ೩ ॥ ಜನಪದಗಳಾಗಿ ಕಾನನವಾಗಿ ಮನ್ವಾದಿ । ದಿನಗಳಲ್ಯಾಗಿ ಮತ್ತೇನಾಗಲಿ ॥ ಮನುಜ ಮಜ್ಜನಗೈಯೆ ವಾಜಪೇಯಾದಿ ಮಖ । ವನುಸರಿಸಿದದಕೆ ಫಲವೇನು ತತ್ಫಲವೀವೆ ॥ ॥ ೪ ॥ ಅರವತ್ತು ಸಹಸ್ರ ವರುಷಂಗಳಲ್ಲಿ ನಿ । ರ್ಜರ ತರಂಗಿಣಿಯ ಮಜ್ಜನದ ಫಲವು ॥ ಗುರುವು ಕನ್ಯಸ್ಥನಾಗಿರಲು ವಂದಿನ ಮಿಂದ । ನರ ರಿಗಾಪುಣ್ಯ ಸಮನೆನಿಸಿ ತತ್ಫಲವೀವೇ ॥ ೫ ॥ ಮನನಶೀಲ ಸುಯೋಗಿ ಗಳಿಗಾವಗತಿಯು ಇಹ । ದನುದಿನದಿ ನಿನ್ನ ತೀರದಲಿ ಇಪ್ಪಾ ॥ ಮನು ಜೋತ್ತಮರಿಗೆ ಆಗತಿಯಿತ್ತು ಪಾಲಿಸುವೆ । ಅನುಪಮ ಸುಕಾರುಣ್ಯಕೆಣೆ ಗಾಣೆ ಜಗದೊಳಗೆ ॥ ೬ ॥ ತಾಯೆ ಯೆನ್ನನುದಿನದಿ ಹೇಯಸಂಸಾರ ದೊಳ । ಗಾಯಾಸಗೊಳಿಸದಲೆ ಕಾಯಬೇಕೂ ॥ ವಾಯುಪಿತ ಶ್ರೀಜಗ ನ್ನಾಥವಿಠಲನ ಹೃ । ತ್ತೋಯಜದೊಳಗೆ ಕಾಂಬುಪಾಯಮಾರ್ಗವ ತೋರೇ ॥ ತ್ರಾಣಿ ಶ್ರೀಕೃಷ್ಣವೇಣೀ ॥ ೭ ॥ ಶ್ರೀಃ ॥

## ೧೨೭. ರಾಗ ಶಂಕರಾಭರಣ, ಆದಿತಾಳ.

ನಮೋ ನಮಸ್ತೇ । ನರಸಿಂಹದೇವಾ । ಸ್ಮರಿಸುವವರ ಕಾವಾ ॥ ಪಲ್ಲ ॥ ಸುಮಹಾತ್ಮನಿನಗೆಣೆ ಲೋಕದೊಳಾವಾ । ತ್ರಿಭುವನಸಂಜೀವಾ । ಉಮೆ ಯರಸನ ಹೃತ್ಕಮಲದ್ಯುಮಣಿ ಮಾ । ರಮಣ ಕನಕಸಂಯಮಿವರ ವರದಾ ॥ ಅನುಪಲ್ಲ ॥ ಕ್ಷೇತ್ರಜ್ಞ ಕ್ಷೇಮಧಾಮಭೂಮಾ । ದಾನವಕುಲ ಭೀಮಾ । ಗಾತ್ರಸನ್ನುತ ಬ್ರಹ್ಮಾದಿಸ್ತೋಮಾ । ಸನ್ಮಂಗಳ ನಾಮಾ ॥ ಚಿತ್ರಮಹಿಮ ನಕ್ಷತ್ರನೇಮಿ ಸ । ರ್ವತ್ರಮಿತ್ರ ಸುಚರಿತ್ರ ಪವಿತ್ರಾ ॥ ೧ ॥ ಅಪರಾಜಿತ ಅನಘ ಅನಿರ್ವಿಣ್ಣಾ । ಲೋಕೈಕಶರಣ್ಯಾ । ಶಫರಕೇತುಕೋಟಿ ಲಾವಣ್ಯಾ । ದೈತ್ಯೇಂದ್ರಹಿರಣ್ಯಾ ॥ ಕಶಿಪುಸುತನ ಕ್ಯಾದಿಪನೆನುತಲಿ ನಿ । ಷ್ಕಪಟ ಮನುಜಹರಿವಪುಷ ನಿನಾದೇ ॥ ೨ ॥ ತಪನಕೋಟಿಪ್ರಭಾವ ಶರೀರಾ । ದುರಿತೌಘವಿದೂರಾ । ಪ್ರಪಿತಾಮಹ ಮಂದಾರ । ಖಳವಿಪಿನ ಕುಠಾರಾ ॥ ಕೃಪಣಬಂಧು ತವ ನಿಪುಣತನಕೆ ನಾ । ನುಪಮೆಗಾಣೆ

ಕಾಶ್ಯಪಿವರವಾಹನಾ ॥ ೩ ॥ ವೇದ ವೇದಾಂಗ ವೇದವೇದ್ಯಾ । ಸಾಧ್ಯ ಅಸಾಧ್ಯಾ । ಶ್ರೀದ ಮುಕ್ತಾಮುಕ್ತರಾರಾಧ್ಯಾ ॥ ಅನುಪಮ ಅನವದ್ಯಾ ॥ ಮೋದಮಯನೆ ಪ್ರಹ್ಲಾದವರದ ನಿ । ತ್ಯೋದಯಮಂಗಳ ಪಾದಕಮ ಲಕೆ ॥ ೪ ॥ ಅನಿಮಿತ್ತಬಂಧು ಜಗನ್ನಾಥ । ವಿಠಲ ಸಾಂಪ್ರತ । ನಿನಗೆ ಬಿನ್ನೈಸುವೆ ಯೆನ್ನಯ ಮಾತಾ । ಲಾಲಿಸುವದು ತಾತಾ ॥ ಗಣಸೆಯಿಲ್ಲ ದವಗುಣವೆಣಿಸದೆ ಪ್ರತಿ । ಕ್ಷಣಕೆ ಕಥಾಮೃತ ಉಣಿಸು ಕರುಣದಿ ॥ ೫ ॥

೧೨೮. ರಾಗ ಮೋಹನ, ಅಟತಾಳ.

ಶಂಭೋ ಸುರ ಗಂಗಾಧರನೇ ॥ ಪಾಲಿಸಂಬಾರಮಣ ಲಿಂಗಾ ॥ ಪಲ್ಲ ॥ ನಂಬಿದವರಘಕದಂಬ ನೀ ಪವನ ಹೇ । ರಂಬಜನಕ ಕರುಣಾಂಬುಧಿ ಗುರುವರ ॥ ಅನುಪಲ್ಲ ॥ ಇಳಿದೇವ ಇಂದು ಮೌಳಿ । ಇಚ್ಛಿತ ಫಲ । ಸಲಿಸುವ ಘನತ್ರಿಶೂಲಿ ॥ ಸಲೆ ನಂಬಿದೆನೊ ಹಲಾಹಲಕಂಠ । ಸಲಹೆನ್ನ ಸತತ ರೌಪ್ಯಾಚಲನಿವಾಸ ವರಪಂಪಾ ॥ ನಿಲಯ ನಿರ್ಜರ ಸೇವಿತಾ ನಳ । ನಳಿನಸಖ ಸೋಮೇಶನೆ ಬಾಂ । ದಳ ಪುರಾಂತಕ ನಿಜಶರಣ ಶಿವ । ವೃಷಾರೋಹಣ ವಿಬುಧವಂದ್ಯನೆ ॥ ೧ ॥ ಮಾರಾರಿ ಮಹದೇವ । ನಿನ್ನಯ ಪಾದ । ವಾಂಜದಳಯುಗ್ಮವ ॥ ಸಾರಿದೆ ಸತತ ಸರೋರುಹೇ ಕ್ಷಣನೆ ಹೃ । ದ್ವಾರಿಜದಲಿ ತೋರೋ ಗಾರುಮಾಡದಲೆನ್ನ ॥ ಆರು ಮೊಗನಯ್ಯ ಅಮಿತಗುಣಗಣ । ವಾರಿಸಿಧಿ ವಿಗತಾಘವಾಕ್ಯಳಾ । ಗಾರ ಮಿತ್ರ ಪವಿತ್ರ ಸುಹೃದ ಶ । ರೀರ ದುರಿತಾರಣ್ಯಪಾವನ ॥ ೨ ॥ ಧೃತಡಮ ರುಗಸಾರಂಗ । ನಿನ್ನಯ ಪಾದ । ಶತಪತ್ರಾರ್ಚಿಪರ ಸಂಗ ॥ ಸತತ ಪಾಲಿ ಸೊ ಜಗನ್ನಾಥವಿಟ್ಠಲನ ಸಂ । ಸ್ತುತಿಸುವ ನೆರೆಧೀರ ಕ್ಷಿತಿಸುಂದರಾಧ್ವನಿ ॥ ಶತಮುಖನ ಜೈಸಿದನ ಪುತ್ರನ ಪಿತನ ಜನಕನ ಕೈಲಿ ಕೊಲಿಸಿದ । ಅತುಳ ಭುಜಬಲ ಭೂತಪಕೆ ಪಾ । ರ್ವತಿ ಮುಖಾಬ್ಜೋದಯ ದಿವಾಕರ ॥ ೩ ॥

✓೧೨೯. ರಾಗ ಆನಂದಭೈರವಿ, ಅಟತಾಳ.

ಶ್ರೀವೆಂಕಟಾಚಲನಿವಾಸಾ । ನಿನ್ನ । ಸೇವಾನುಸೇವಕರ ದಾಸಾ । ಎನಿಸಿ । ಜೀವಿಸುವ ನರಗೆ ಆಯಾಸಾ । ಯಾಕೆ । ಶ್ರೀಪರನೆ ಕೊಡು

ಯೆನಗೆ ಲೇಸಾ ॥ ೧ ॥ ಸ್ವಾಮಿಃಕಾಸಾರಪ್ರಭು ನಿನ್ನಾ । ದಿವ್ಯ । ನಾಮ ಒದಗಲು ಜಿಹ್ವೆಗೆನ್ನಾ । ದೋಷ । ಶೀಮೆಗಾಣದರಿದ್ದರೆನ್ನ । ಸ್ವಾಮಿ । ನೀ ಮರೆಯಲಾಗದು ಸುಪ್ರಸನ್ನಾ ॥ ೨ ॥ ನೀಚಯೋನಿಗಳಲ್ಲಿ ಬಂದೆ । ಇನ್ನು । ನಾಚಿಕಿಲ್ಲವೋ ಯೆನಗೆ ತಂದೆ । ನೀನೆ । ಮೋಚಕನು ಬಿನ್ನಪ ವಿದೆಂದೆ । ಸವ್ಯ । ಸಾಚಿಸಖ ಕೈಪಿಡಿಯೊ ತಂದೆ ॥ ೩ ॥ ನಾನೊಬ್ಬನೇ ನಿನಗೆ ಭಾರ । ವಾದೆ । ನೇನೋ ಸಂತತ ನಿರ್ವಿಕಾರ । ಯೆನ್ನ । ಹೀನತ್ವ ನೋಡಲ್ಪುಪಾರ । ಚಕ್ರ । ಪಾಣಿ ಮಾಡದಿರೆನ್ನ ದೂರಾ ॥ ೪ ॥ ಕಂಡ ಕಂಡವರಿಗಾಲ್ಪರಿದು । ಬೇಡಿ । ಬೆಂಡಾದೆ ನಿನ್ನಂಘ್ರಿ ಮರೆದು । ದಿಟ । ತೊಂಡವತ್ಸಲನೆಂಬ ಬಿರಿದು । ಕಾಯೋ । ಪುಂಡರೀಕಾಕ್ಷ ನೀನರಿದೂ ॥ ॥ ೫ ॥ ಈಸಮಯದೊಳೆನ್ನ ತಪ್ಪ । ನೋಡಿ । ನೀ ಸಡಿಲ ಬಿಡುವರೇ ನಪ್ಪ । ನಿನ್ನ । ದಾಸರ್ಪೆಸರ್ಗೊಳಲು ಬಪ್ಪಾ । ದೋಷ । ನಾಶವಾ ಗೋದು ತಿಮ್ಮಪ್ಪಾ ॥ ೬ ॥ ಕಾಮಾದಿಗಳ ಕಾಟದಿಂದ । ನಿನ್ನ । ನಾ ಮರೆದೆ ಸಚ್ಚಿದಾನಂದ । ಯೆನ್ನ । ಈಮಹಾದೋಷಗಳ ವೃಂದಾ । ನೋಡದೆ । ನೀ ಮನ್ನಿಸೆನ್ನ ಮುಕುಂದಾ ॥ ೭ ॥ ನೀ ಪಿಡಿದ ದರಸಹ ಸ್ರಾರ । ಸುಜನ । ಪಾಪಾಟವಿಗೆ ಸುಕುಠಾರಾ । ಜಗ । ದ್ವ್ಯಾಪಕನೆ ಯೆನ್ನ ಸಂಸಾರಾ । ಘೋರ । ಕೂಪದಿಂದೆತ್ತಯ್ಯ ಧೀರಾ ॥ ೮ ॥ ಸಿಂಧೂ ರರಾಜಪರಿಪಾಲ । ಕೋಟಿ । ಕಂದರ್ಪಲಾವಣ್ಯಶೀಲ । ಧರ್ಮ ಮಂ ದಾರ ಭೂಜಾಲವಾಲ । ಯೋಗಿ । ಸಂದೋಹಹೃತ್ಕುಮುದ ಶೀಲಾ ॥ ೯ ॥ ಶಿವನ ವೈರಿಯ ಕೊಂದ ಶಕ್ತಾ । ಪುಣ್ಯ । ಶ್ರವಣ ಕೀರ್ತನ ನಿನ್ನ ಭಕ್ತ । ಜನರ । ಭವದೊಳಗೆ ದಣಿಸುವದು ಯುಕ್ತ । ವೇನೋ । ಭುವನ ಪಾವನ ನಿತ್ಯಮುಕ್ತಾ ॥ ೧೦ ॥ ಶ್ರೀಕರಶ್ರೀಮದಾನಂತ । ನಿಖಿಳ । ಲೋಕೈಕನಾಥ ನಿನ್ನಂಥ । ಸಖರ । ನಾ ಕಾಣೆನೆಲ್ಯೊ ಮಹಂತಾ । ಯೆನ್ನ । ನೀ ಕಾಯೋ ಕಂಡ್ಯ ಭೂಕಾಂತಾ ॥ ೧೧ ॥ ಕರಕರ್ಮ ಚಿತ್ತ ತ್ವಗ್ರಸನಾ । ಕಾಯ । ಕರಣ ಮನಹಂಕಾರ ಘ್ರಾಣಾ । ಬುದ್ಧಿ । ಚರಣ ಪಾಯುಪಸ್ಥ ನಯನಾ । ಜಾತ । ಉರುಪಾಪ ಕ್ಷಮಿಸು ಶ್ರೀರಮಣಾ ॥ ೧೨ ॥ ಅನಿ ಮಿತ್ತಬಂಧುಃ ನೀ ಯೆನ್ನ । ಬಿಡುವ । ದನುಚಿತವೋ ಲೋಕ ಪಾವನ್ನ ।

ಚರಿತ । ಮನವಚನಕಾಯದಲಿ ನಿನ್ನ । ಪಾದ । ವನಜ ನಂಬಿದೆ ಸುಪ್ರ ಸನ್ನಾ ॥ ೧೩ ॥ ನೀನಲ್ಲದೆನಗೆ ಗತಿಯಿಲ್ಲಾ । ಪವ । ಮಾನವಂದಿತ ಕೇಳೋ ಸೊಲ್ಲಾ । ಯೆನ್ನ । ಜ್ಞಾನೇಚ್ಛಕ್ರಿಯಂಗಳೆಲ್ಲಾ । ನಿನ್ನ । ಧೀನ ವಲ್ಲವೆ ಲಕ್ಷ್ಮೀನಲ್ಲಾ ॥ ೧೪ ॥ ಪ್ರಾಚೀನಕರ್ಮಾಂಧಕೂಪ । ದೊಳಗೆ । ಯೋಚಿಸುವ ನರರ ಸಂತಾಪ । ನಿನಗೆ । ಗೋಚರಿಸದೇನೋ ಬಹು ರೂಪ । ವೆಂಕ । ಟಾಚಲನಿಲಯ ಸಾಹಿ ಶ್ರೀಪಾ ॥ ೧೫ ॥ ಯಾಕೆ ದಯಬಾರದೆನ್ನಲ್ಲಿ । ನರಕ । ನಾಕ ಭೂಲೋಕಂಗಳಲ್ಲಿ । ಚಲಿಸಿ । ನಾ ಕಷ್ಟಬಟ್ಟಬಗೆ ಬಲ್ಲಿ । ವೀತ । ಶೋಕ ಕೊಡು ಭಕುತಿ ನಿನ್ನಲ್ಲಿ ॥ ೧೬ ॥ ನಿನ್ನಂಘ್ರಿದರ್ಶನವ ಕೊಡದೆ । ಹೀಗೆ । ಬನ್ನಬಡಿಸುವರೇನೊ ಬಿಡದೆ । ನಾನು । ಮುನ್ನ ಮಾಡಿದ ಪಾಪ ಕೆಡದೆ । ನೀ ಪ್ರ । ಪನ್ನ ವತ್ಸಲ ನೆಂದು ನುಡಿದೆ ॥ ೧೭ ॥ ತಾಪತ್ರಯಗಳಿಂದ ನೊಂದೆ । ಮಹಾ । ಪಾಪಿ ಷ್ಠರಲ್ಲ್ಯನ್ನ ತಿಂದೆ । ಇನ್ನು । ಅಪರೇತೇಶ್ವರನ ಮುಂದೆ । ಪೋಗಿ । ನಾ ಪೇಳಿಕೊಳಲೇನು ತಂದೆ ॥ ೧೮ ॥ ದೇಹಸಂಬಂಧಿಗಳ ಸಹಿತ । ವಾಗಿ । ನಾ ಹೊಂದಿದೆನು ಲೋಕಮೋಹಿತ । ಯೆನ್ನ । ಮೋಹಿಪದು ನಿನಗೇನು ವಿಹಿತ । ಹೃದಯ । ಬಾಹಿರಂತರದಿ ಸನ್ನಿಹಿತಾ ॥ ೧೯ ॥ ಪೋಗುತಿದೆ ದಿವಸ ಕಮಲಾಕ್ಷ । ಪರಮ । ಯೋಗೇಶ ನಿನ್ನ ಅಪರೋಕ್ಷ । ಯೆನಗೆ । ಹೇಗಾಗುವದೋ ಸುರಾಧ್ಯಕ್ಷ । ದುರಿತ । ನೀಗು ಕಾಮಿತಕಲ್ಪವೃಕ್ಷ ॥ ॥ ೨೦ ॥ ಗತಿ ಯಾರು ನಿನ್ನುಳಿದು ದೇವ । ರಮಾ । ಪತಿ ನೀನೆ ಭಕ್ತ ಸಂಜೀವ । ಯೆನ್ನ । ಸತಿಸುತರ ಅನುದಿನದಿ ಕಾವಾ । ಭಾರ । ಸತತ ನಿನ್ನದು ಮಹಾನುಭಾವ ॥ ೨೧ ॥ ದೊಡ್ಡವರ ಕಾಯ್ವುದೇನರಿದು । ಪರ ಮ । ದಡ್ಡರನೆ ಕಾಯ್ವದೆ ಬಿರಿದು । ಯೆನ್ನ । ಗುಡ್ಡದಂತಿಹ ಪಾಪ ತರಿದು । ಕಾಯೋ । ವಡ್ಡಿನಾಯಕಸಾರೆಗರದೂ ॥ ೨೨ ॥ ಜ್ಞಾನಿಗಳು ನೀಚ ರಲಿ ಕರುಣಾ । ಮಾಡ । ರೇನೋ ಬಿಡುವರೆ ರಥಚರಣ । ಪಾಣಿ । ಭಾನುಚಂಡಾರವಿಕಿರಣ । ಬಿಡದೆ । ತಾನಿಪ್ಪನೆ ರಮಾರಮಣಾ ॥ ೨೩ ॥ ಆಡಲ್ಯಾತಕೆ ಬಹಳ ಮಾತಾ । ಪರರ । ಬೇಡಲಾರೆನೋ ಜಗತ್ರಾತಾ । ಹೀಗೆ । ಮಾಡುವರೇ ಕೇಳೆನ್ನ ಮಾತಾ । ನೀನೆ । ನೀಡೆನಗೆ ಪುರು

ಷಾರ್ಥ ದಾತಾ ॥ ೨೪ ॥ ಬೇಡಲೇತಕೆ ಬಹಳ ಮಾತಾ । ಯೆನ್ನ । ಕೇಡು ನಿನ್ನದಲ್ಲೆ ಬಲಿಧೌತ । ಪಾದ । ಬೇಡಿಕೊಂಬುವೆ ನಾ ಅನಾಥ । ದೂರ । ನೋಡಲಾಗದು ಪಾರ್ಥಸೂತಾ ॥ ೨೫ ॥ ಸಾರ ಸದ್ಭಕ್ತಿಯುಲಿ ನಿತ್ಯಾ । ಬಿಡದೆ । ಶಾರದೇಶನ ತುತಿಪ ಭಕ್ತಾ । ಜನರ । ಪಾರ ಸಂತೈ ಸುವದು ಮಿಥ್ಯಾ । ವಲ್ಲ । ಶ್ರೀರಮಣ ಸಾಕ್ಷಿದಕೆ ಸತ್ಯಾ ॥ ೨೬ ॥ ಫಣಿರಾಜಭೋಗ ಪರಿಯಂಕಾ । ಶಯನ । ಪ್ರಣತಾರ್ತಿ ಹರನೆಂಬೋ ಅಂಕಾ । ಕೇಳಿ । ಮಣಿದೆ ನಿನ್ನಂಘ್ರಿಗೆ ಶಶಾಂಕಾ । ಭಾಸ । ದಣಿಸಲಾಗದು ನಿಷ್ಕಳಂಕಾ ॥ ೨೭ ॥ ಕಾರ್ತವೀರ್ಯಾರ್ಜುನನ ಕೊಂದ । ಭವ್ಯ । ಕೀರ್ತಿನಿನ್ನಾನಂದ ವೃಂದ । ಸತತ । ಕೀರ್ತಿಸುವ ನರರ ಬಹು ಕುಂದಾ । ನೋಡ । ದಾರ್ತನ್ನ ಪೊರೆಯೋ ಗೋವಿಂದಾ ॥ ೨೮ ॥ ದಯದಿಂದ ನೋಡೆನ್ನ ಹರಿಯೇ । ಜಗ । ನ್ಮಯನೆ ಜ್ಞಾನಾನಂದಸಿರಿಯೇ । ಮನೋ । ಮಯುವ ಪರಿಹರಿಸಿನ್ನು ದೊರಿಯೇ । ಸರ್ವ । ಭಯದೂರರಿನ್ನೊಬ್ಬರರಿಯೇ ॥ ೨೯ ॥ ನರಸಿಂಹ ನಿನ್ನುಳಿದು ಜಗವ । ಕಾಯ್ವ । ಪರದೈವರುಂಟೆಂದು ಬಗೆವ । ನರರ । ಪರಮೇಷ್ಠಿರಾಯನು ನಗುವ । ನಿತ್ಯ । ನಿರಯಾಂಧಕೂಪದೊಳು ಹುಗಿವಾ । ೩೦ ॥ ದಾಸದಾಸರ ದಾಸನೆಂದೂ । ಬಿಡದೆ । ನೀ ಸಲಹೊ ಯೆನ್ನನೆಂದೆಂದೂ । ನಿನ್ನ । ನಾ ಸೇವಿಸುವೆ ಕೃಪಾಸಿಂಧೂ । ಯೆಮ್ಮ । ದಾಸಿಸದಿರನಿಮಿತ್ತಬಂಧೂ ॥ ೩೧ ॥ ಎಂದೆಂದು ನೀ ಬಡವನಲ್ಲಾ । ನಿನ್ನ । ಪೊಂದಿದವನಾ ಬಿಡುವನಲ್ಲಾ । ಹೃದಯ । ಮಂದಿರದೊಳಗೆ ಬಲ್ಯಲ್ಲಾ । ಚಿದಾ । ನಂದ ನೀ ಭಕ್ತವತ್ಸಲ್ಲಾ ॥ ೩೨ ॥ ಕಾಮಿತಪ್ರದನೆಂಬೋ ಬಿರಿದು । ಕೇಳಿ । ನಾ ಮುದದಿ ಬಂದೆನೋ ಅರಿದು । ಯೆನ್ನ । ತಾಮಸ ಮತಿಗಳೆಲ್ಲ ತರಿದು । ಮಮ । ಸ್ವಾಮಿ ನೋಡೆನ್ನ ಕಣ್ದೆರೆದೂ ॥ ೩೩ ॥ ಹಿತವರೊಳು ನಿನಗಧಿಕರಾದ । ತ್ರಿದಶ । ತತಿಗಳೊಳು ಕಾಣೆನೋ ಪ್ರಮೋದ । ನೀನೆ । ಗತಿಯೆಂದು ನಂಬಿದೆ ವಿವಾದ । ವೇಕೋ । ಪತಿತ ಪಾವನ ತೀರ್ಥಪಾದಾ ॥ ೩೪ ॥ ಮಡದಿ ಮಕ್ಕಳು ತಂದೆತಾಯಿ । ಯೆನ್ನ । ಒಡಹುಟ್ಟಿದವರ ನೀ ಕಾಯಿ । ಲೋಕ । ದೊಡೆಯ ನೀನಲ್ಲದಿನ್ನಾರೈ । ಯೆನ್ನ । ನುಡಿಯ ಲಾಲಿಸು

ಶೇಷಶಾಯಿ ॥ ೩೫ ॥ ಅನುಬಂಧ ಜನರಿಂದ ಬಪ್ಪ । ಕ್ಲೇಶ । ಅನುಭವಿ ಸಲಾರೆ ಯೆನ್ನಪ್ಪ । ಉದಾ । ಸಿನವಮಾಡಿ ದಯಮಾಡದಿಪ್ಪ । ರೇನೋ । ಘನಮಹಿಮ ಫಣಿರಾಜತಲ್ಪ ॥ ೩೬ ॥ ಹದಿನಾಲ್ಕು ಲೋಕಂಗಳನಾಳ್ವ । ಬ್ರಹ್ಮ। ಮೊದಲಾದವರು ನಿನ್ನ ಚೆಲ್ವಾ । ನಖದ । ತುದಿಬಣ್ಣ ಕಂಡು ಕಡೆಬೀಳ್ವ । ದಿಲ್ಲಾ । ವಿಧಿಸಲಾಪನೆ ನಿನ್ನ ಸಲ್ವಾ । ೩೭ । ಧನ ಧಾನ್ಯ ಪಶುಪತ್ನಿ ಗೇಹ । ಜನನೀ । ಜನಕ ಜಾಮಾತಸಖನೇಹ । ಅನುಜ । ತನುಜಾಪ್ತವರ್ಗದಿಂದೀಹ । ಸೌಖ್ಯ । ನಿನಗರ್ಪಿಸಿದೆ ಯೆನ್ನ ದೇಹಾ ॥ ॥ ೩೮ ॥ ನೀನಿತ್ತ ಸಂಸಾರದೊಳಗೆ । ಸಿಲುಕಿ । ನಾ ನೊಂದೆ ಕರಿ ನಿನ್ನ ಬಳಿಗೆ । ಚರಣ । ಧ್ಯಾನದೊರಕಲು ಭವದಿ ಮುಳುಗೆ । ನಿನ್ನ । ಕಾಣ ದಿರಲಾರೆನರೆಘಳಿಗೆ ॥ ೩೯ ॥ ಸಲುಗೆ ಬಿನ್ನಪವ ನೀ ಕೇಳೊ । ಯೆನ್ನ । ಬಲು ದುರುಳತನವ ನೀ ತಾಳೊ । ನೀನೆ । ನೆಲೆಯುಲ್ಲದೆನಗ್ಯಾರು ಪೇಳೊ । ಯೆನ್ನ । ಕುಲದೈವ ಬಹುಕಾಲ ಬಾಳೊ ॥ ೪೦ ॥ ಸಾಂದೀಪ ನಂದನನ ತಂದ । ನಂದ । ನಂದನನೆ ಯೆನ್ನ ಭಯವೃಂದಾ । ಕಳದು । ಯೆಂದೆಂದು ಕುಂದದಾನಂದ । ಮೀಯೊ । ಇಂದಿರಾರಮಣ ಗೋವಿಂ ದಾ ॥ ೪೧ ॥ ವಿಶ್ವತೈಜಸ ಪ್ರಾಜ್ಞ ತುರಿಯಾ । ಯೆನ್ನ । ದುಃಸ್ವಭಾವವ ನೋಡಿ ಪೊರೆಯ । ದಿಹರೆ । ನಿಸ್ಪೃಹ ನಾ ನಿನ್ನಂಘ್ರಿಮೊರೆಯ । ಪೊಕ್ಕೆ । ಅಸ್ವತಂತ್ರನ ಕಾಯೊ ಸಿರಿಯಾ ॥ ೪೨ ॥ ಇಹಪರದಿ ಸೌಖ್ಯಪ್ರದಾತಾ । ನೀನೆ । ಅಹುದೋ ಲೋಕೈಕ ವಿಖ್ಯಾತಾ । ಮಹಾ । ಮಹಿಮ ಗುಣ ಕರ್ಮ ಸಂಜಾತ । ದೋಷ ದಹಿಸು ಸಂಸಾರಾಬ್ಧಿ ಪೋತಾ ॥ ೪೩ ॥ ಲೋಕಬಾಂಧವನೆಂಬೊ ಖ್ಯಾತಿ । ಯನ್ನ । ನಾ ಕೇಳಿದೆನು ಖಳಾ ರಾತಿ । ಮನೋ । ಶೋಕ ಮೋಹಜ್ಞಾನ ಭೀತಿ । ಬಿಡಿಸು । ಶ್ರೀಕರಾ ರ್ಚಿತ ಸ್ವಯಂಜ್ಯೋತಿ ॥ ೪೪ ॥ ಒಂದುಗೇಣೊಡಲನ್ನಕಾಗಿ । ಅಲ್ಪ । ಮಂದಭಾಗ್ಯರ ಮನೆಗೆ ಪೋಗಿ । ದೈನ್ಯ । ದಿಂದ ಸತ್ಕರ್ಮಗಳ ನೀಗಿ । ಕಂದಿ । ಕುಂದಿದೆನು ಸಲಹೋ ಲೇಸಾಗಿ ॥ ೪೫ ॥ ಪಾತಕರೊಳಧಿಕ ನಾನಯ್ಯ । ಜಗ । ತ್ರಾತಕವಳಿವ ಮಹಾರಾಯಾ । ನಿನ್ನ । ದೂತ ನಾನಲ್ಲವೇ ಜೀಯ । ಜಗ । ನ್ನಾಥವಿಠಲ ಪಿಡಿಯೋ ಕೈಯ್ಯಾ ॥ ೪೬ ॥

## ೧೩೦. ರಾಗ ಧನ್ಯಾಸಿ, ಝಂಪೆತಾಳ.

ಸಿರಿರಮಣ ತವ ಚರಣ ಸೇವೆ ದೊರಕುವಧ್ಯಾಗೆ । ಪರಮ ಪಾಪಿಷ್ಠ ನಾನೂ ॥ ಪಲ್ಲ ॥ ನರಹರಿಯೆ ನಿನ್ನ ನಾಮದ ಸ್ಮರಣೆಮಾಡದಲೆ । ನರಕಕ್ಕೆ ಗುರಿಯಾದೆನೋ । ಹರಿಯೇ ॥ ಅನುಪಲ್ಲ ॥ ಕೆರೆಬಾವಿ ದೇವಾಲಯವ ಕೆಡಹಿ ದಿವ್ಯ ಹಿರಿದಾದ ಮನೆಕಟ್ಟಿದೇ । ನೆರೆ ನಡವ ಮಾರ್ಗದಾ ಅರವಟ್ಟಿಗೆಗಳನೆ ತರತರದಿ ಬಿಚ್ಚಿ ತಂದೆ ॥ ಪರಮ ಸಂಭ್ರಮದಿಂದ ಅರಳಿಯ ಮರ ಕಡಿಸಿ ಕೊರಿಸಿ ಬಾಗಿಲನಿಡಿಸಿದೆ । ವರಮಂದಿರವ ಮುಗಿಸಿ ಹರುಷಚಿತ್ರವ ಬರಿಸಿ ಪರಿಪರಿಯ ಸುಖವ ಸುರಿದೆ । ಮೆರೆದೇ ॥ ೧ ॥ ಹೊಸಮನೆಯ ಕಂಡು ಬಲುಹಸಿದು ಭೂಸುರರು ಬರೆ ಕೊಸರಿಹಾಕುತಾ ದಬ್ಬುತಾ । ಶಶಿಮುಖಿಯೆ ಬಾರೆಂದು ಅಸುವನೇ ಬಣ್ಣಿಸುತ ವಶನಾಗಿ ಅವಳೊಲಿಯುತಾ ॥ ದಶಮಿಯೇಕಾದಶೀದ್ವಾದಶಿದಿನತ್ರಯದಿ ಅಶನವೆರಡೊತ್ತುಣ್ಣುತಾ । ಗಸಗಸನೆ ತಾಂಬೂಲ ಪಶುವಿನಂದದಿ ಮೆದ್ದು ಕುಸುಮಗಂಧಿಯ ರಮಿಸುತಾ । ಸತತಾ ॥ ೨ ॥ ಸಾಕಲ್ಯದಿಂದ ಸಾಲಿಗ್ರಾಮದಭಿಷೇಕ ಆಕಳ್ಸಾಲಲಿ ಮಾಡದೆ । ನಾಲ್ಕೆಂಟು ನಾಯಿಗಳು ಜೋಕೆಮನೆಯಲಿ ಬದುಕಬೇಕೆಂದು ಹಾಲನ್ಹೊಯ್ದೆ ॥ ಕಾಕುಬುದ್ಧಿಗಳಿಂದ ಗುಡಿಗುಡಿ ನಶಿಪುಡಿಹಾಕಿ ಭಂಗಿಯ ಸೇದಿದೆ । ಲೋಕನಿಂದಿತನಾಗಿ ಪಾಪಕ್ಕೆ ಕೈಹಚ್ಚಿ ಅನೇಕ ಜೂಜುಗಳಾಡಿದೆ । ಬಿಡದೇ ॥ ೩ ॥ ಸ್ನಾನ ಸಂಧ್ಯಾ ಜಪತಪಾದಿಗಳನೆ ಮಾಡಿ ಭಾನುಗರ್ಘ್ಯವನು ಕೊಡದೆ । ಶ್ರೀನಿವಾಸ ನಿನ್ನ ಜ್ಞಾನಪೂರ್ವಕಪೂಜೆ ನಾನೊಂದುಕ್ಷಣ ಮಾಡದೆ ॥ ಬೇನೆ ಬಂದರಿತಾಗಿ ಹೀನ ಸಕೇಶಿಕೈನಾನಾವಿಧಾನ್ನ ತಿಂದೆ । ಜೀನತ್ವದಲಿ ದುಡ್ಡು ದಾನಧರ್ಮವ ಕೊಡದೆ ಶ್ವಾನನಂದದಿ ಚರಿಸಿದೇ । ತಿರಿದೇ ॥ ೪ ॥ ಉತ್ತಮ ಬ್ರಾಹ್ಮಣರ ವೃತ್ತಿಯನೆ ತೆಗೆದು ಬ್ರಹ್ಮಹತ್ಯಗಾರನು ಎನಿಸಿದೆ । ಮತ್ತೆ ಮುಂಜೀಮದುವೆ ಸಮಯಕ್ಕೆ ಪೋಗಿ ನಾ ಸತ್ತ ಸುದ್ದಿಯ ಪೇಳಿದೆ ॥ ವಿತ್ತವಿದ್ದವರ ಬೆನ್ಹತ್ತಿ ದೂತರ ಕಳುಹಿ ಕುತ್ತಿಗೆಯ ನಾ ಕೊಯ್ಸಿದೇ । ಹತ್ತು ಜನ ಯನ್ನೆಣಿಕೆ ನಿತ್ಯ ಕಲ್ಹೊಡೆಯುತಿರೆ ವೃತ್ಯದೇವತೆ ಯೆನಿಸಿದೆ । ಬಿಡದೇ ॥ ೫ ॥ ಬಾದರಾಯಣಕೃತ ಭಾಗವತವೋದುವುದಕಾದ

ರವು ಪುಟ್ಟಲಿಲ್ಲಾ । ವಾದಿಯಾ ಮತವಳಿದು ಮಧ್ವಸಿದ್ಧಾಂತದಾ ಹಾದಿಗೇ ಹೋಗಲಿಲ್ಲಾ ॥ ಶೋಧಿಸಿದ ಚಿನ್ನಕ್ಕೆ ಸಮನಾದ ವೈಷ್ಣವರ ಪಾದಕ್ಕೆ ಬೀಳಲಿಲ್ಲಾ । ವೇದಬಾಹಿರನಾಗಿ ಅಪರಾಧಕ್ಕೆ ಮನಸಾಗಿ ಓದಿಕೊಂಡೆನು ಇದಲ್ಲಾ । ಸುಳ್ಳಾ ॥ ೬ ॥ ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರೆನಗೆ ಗತಿಯೇನು ಪೇಳು ಮುಂದೆ । ಸತತ ತವ ಧ್ಯಾನದಿ ನಿರತನಾಗಿ ಇರುವ ಸನ್ಮತಿ ಪಾಲಿಸಯ್ಯ ಯೆನಗೆ ॥ ಪತಿತ ಪಾವನನೆಂಬ ಬಿರಿದು ಅವಸಿಯು ಪೇಳಲೆ ಶ್ರುತಿಯು ಸಾರುತಿದೆ ಹೀಗೆ । ಶಿತಿಕಂಠನುತ ಜಗನ್ನಾಥವಿಠಲ ನಿನ್ನ ತುತಿಸಿ ಮರೆಹೊಕ್ಕೆ ಹರಿಯೆ । ಧೊರೆಯೇ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೧. ರಾಗ ಭೈರವಿ, ತ್ರಿಪುಟತಾಳ.

ಕಂಡೆ ಕಂಡೆ । ಕೃಷ್ಣನ ಕಂಡೆ ಕಂಡೆ ॥ ಪಲ್ಲ ॥ ಕಂಡೆ ಕಮಲದಳಾಯತಾಕ್ಷನ । ಪುಂಡರೀಕ ಭವಾದಿ ಪೂಜ್ಯನ । ದಂಡಪಾಶಾನ್ವಿತನಕೋಟಿಮಾ । ರ್ತಾಂಡ ಸಮಸಂಕಾಶ ದೇವನ ॥ ಅನುಪಲ್ಲ ॥ ಅರುಣಪಂಕಜದಿರವ ಪೋಲುವ । ಚರಣತಳನಖಬೆರಳಪಂಕ್ತಿಯು । ಶರಧಿಜಾನುಗಳೆರಡು ದರ್ಪಣ । ತೆರದಿ ಶೋಭಿಸೆ ಕರಿಕರೋರುಗಳು । ತರುನಿತಂಬದಿ । ಮೆರೆವ ಪೀತಾಂ । ಬರದಿ ನಿರಿ ಸಡಗರದಿ ದೈತ್ಯರ । ಮರುಳುಗೊಳಿಸಿದ ಪರಮಪುರುಷನ । ಕಂಡೆ ಕಂಡೆ ॥ ೧ ॥ ನಳಿನನಿಭಪೊಕ್ಕಳು ತನೂದರ । ವಳಿಗಳ ತ್ರಯ ಚಲುವವಕ್ಷ । ಸ್ಥಳದಿ ಪದ್ಮಾಲಲನಕಾಂಚನ । ಗಳದ ರೋಮದ ಕಲಿತಭುಜಯುಗ । ಕುಲಿಶ ಪಲ್ದುಷ್ಣಗಳು ಪ್ರಪೋತ್ಸವರ್ತುಳ । ಗಳ ಕಪೋಲ ಪರಿಮಳಿಪ ಚಂಪಕಾ । ದಳರ ನಾಸಿಕ ಜಲಜಲೋಚನ । ವಿಲಸಿತ ಭ್ರೂತಿಲಕ ಫಣೆಯನು ॥ ೨ ॥ ಪೊಳೆವ ಮುಕುಟರಳೆಲೆಯು ಮಕರಕುಂ । ಡಲವು ಮೂಗುತಿ ಯಳೆನಗೆಯ ಮೊಗ । ಹುಲಿಯುಗುರು ಥಳಿಥಳಿಪ ಕೌಸ್ತುಭ । ಹಲವು ಪದಕಾವಳಿಸರಿಗೆ ಶ್ರೀ । ತುಳಸಿ ವನಮಾಲ ಪ್ರಸ್ಗಲಯುರುಳಿವಿಂ । ದಲಿರಸಾದ್ವೈಳದಳಯುಗಳಕರ । ತಳನಾಗೋ ಮುಕ್ತಾಳ ವಡನೆ ಗೋ । ಕುಲದಿ ಚರಿಸಿದಸುಲಲಿತಾಂಗನಾ ॥ ೩ ॥ ವೇಣುಕಡಗೋಲ

ಪಾಣಿ ಪೃಥಳ । ಶ್ರೇಣಿಯಲಿ ವಡ್ಯಾಣನೂಪುರ । ಪ್ರಾಣಮುಖ್ಯರು ಕಾಣ ದತಿ ಕ । ಲ್ಯಾಣ ಗುಣಗಣಶ್ರೇಣಿವಂತನಾ ॥ ಮಾಣದನುದಿನ ಸಾನುರಾ ಗದಿ। ಧೇನಿಸುವ ಮನೋನುಕೂಲಿನ । ಬಾಣಗುರುವಿನ ಕಾಣನೆನಿಸಿದ । ಜಾಣ ಪರಮ ಪುರಾಣ ಪುರುಷನ ॥ ೪ ॥ ಭೂತಕೃತ್ಸದ್ಭೂತಿದಾಯಕ । ವೀತಶೋಕವಿಧಾತಮುರಪುರು । ಹೂತಮುಖ ವಧ್ಯಾತ ಖರಮುರ । ಮಾತುಳಾಂತಕ ಶ್ವೇತವಾಹನ । ಸೂತಗತ ಸಂಕೇತತ್ರಿಗುಣಾ । ಶೀತ ನಂದನಿ ನೇತನವಿನವ । ನೀತಸವಿದಪುರಾತನಜಗ। ನ್ನಾಥವಿಠಲನ ॥ ೫ ॥

## ೧೩೨. ರಾಗ ಕಾಂಬೋಧಿ, ಝಂಪೆತಾಳ.

ಶ್ರೀನಾರಸಿಂಹ ಚಿತ್ಸುಖವಿಮಲಕಾಯ । ದಾನವಾರಣ್ಯಪಾವಕ ವೀತ ಶೋಕ ॥ ಪಲ್ಲ ॥ ಆನತೇಷ್ಟಪ್ರದಾಯಕ ನಮಿಸುವೆನು ಸದಾ । ವೈನಾ ಕಿಧರಬಿಂಬ ಸುರಮುನಿ ಕದಂಬಾ ॥ ಧ್ಯಾನಗಮ್ಯನೆ ಭಕ್ತರಾಪತ್ತು ಕಳೆ ಶಕ್ತ । ನೀನೆ ಗತಿಯೆಂಬೆ ಮುನಿಮನ ವನಜತುಂಬೆ ॥ ೧ ॥ ಶ್ರವಣ ಮಂಗಳನಾಮ ಧೇಯ ನಿರ್ಜಿತಕಾಮ । ಪವನ ದ್ವಿತೀಯರೂಪ ವಿಗತ ಕೋಪಾ ॥ ಸ್ವವಶ ಸ್ವಾತಂತ್ರ ವಿಖನಸಪೂಜ್ಯ ವಜ್ರನಖ ಪರಿದಂಷ್ಟ್ರ ದಶನಭಾರ್ಗವಿರಮಣಗಶನಾ ॥ ೨ ॥ ಆದಿದೇವಾನಂತಮಹಿಮನೆ ನಿಶಿ ತಂತ । ಕಾದುಕೊ ನಿನ್ನವರ ವಿಬುಧಪ್ರವರಾ ॥ ಮೋದಮಯ ಶ್ರೀಜಗನ್ನಾ ಥವಿಠ್ಠಲರೇಯ । ವೈದಿಕವ ನಡಿಸೊ ಲೌಕೀಕಮಾರ್ಗವ ಬಿಡಿಸೊ ॥ ೩ ॥

## ೧೩೩. ರಾಗ ಮುಖಾರಿ, ಝಂಪೆತಾಳ.

ಇರಬೇಕು ನಿಂದಕರು ಸಜ್ಜನರಿಗೆ। ದುರಿತರಾಶಿಗಳೆಲ್ಲ ಪರಿಹರಿಪಗೋಸು ಗದಿ ॥ ಪಲ್ಲ ॥ ಕಲಿಯುಗದಿ ಕೋವಿದರು ಕಲುಷಕರ್ಮವ ಮಾಡೆ । ಕಳ ವಸ್ತಳ ಇರಲೆಂದು ಕಮಲಭವನು ॥ ತಿಳಿದು ನಿರ್ಮಿಸಿದೆ ಇಳೆಯೊಳು ನಿಂದಕರನ ನಿ । ಷ್ಕಲುಷರನ ಮಾಡಿ ತನ್ನವರ ಸಲಹುವ ॥ ೧ ॥ ದಿವಿಜ ರಿಳೆಯೊಳಗೆ ಜನ್ಮಗಳೊಲ್ಲೆವೆಂದಬ್ಜ । ಭವಗೆ ಮೊರೆಯಿಡಲು ಪರವಿತ್ತ ನಂದು ॥ ಭವಕೆ ಕಾರಣಕರ್ಮವವರು ಮಾಡಿದರು ತ । ನ್ನವರು ಎನಿ

ಷರ್ಗೆ ತಜ್ಜನ್ಯಫಲ ಬರಲು ॥ ೨ ॥ ಮಾನವಾಧಮಜನರು ತಾ ನೋಡಿ ಸಹಿಸದಲೆ। ಹೀನಮತಿಯಿಂದ ಮಾತುಗಳಾಡಲು ॥ ಭಾನುಮಂಡಲಕೆ ಮೊಗವೆತ್ತಿ ಉಗುಳಿದರೆ ತ। ನ್ನಾನನವೆ ತೋಯ್ವುದಲ್ಲದರ್ಕಗೇನಪಮಾನ ॥ ೩ ॥ ಮಲವ ತೊಳವಳು ತಾಯಿ ನೀರಿನಿಂದಲಿ ನಿತ್ಯ । ತೊಳೆವ ನಿಂದಕ ತನ್ನಾ ನಾಲಗಿಂದಾ ॥ ಬಲು ಮಿತ್ರನಿವನೆಂದು ತಿಳಿದು ಮನ್ನಿಸಬೇಕು । ಹಲವು ಮಹಪಾಪಗಳ ಕಳೆದು ಪುಣ್ಯವನೀವ ॥ ೪ ॥ ಅನುಭವಿಪ ಕರ್ಮಗಳ ಜನ್ಯಫಲಗಳ ತನ್ನ। ಜನರಿಂದವರಿಗೊಂದು ರೂಪದಿಂದ ॥ ಉಣಿಸಿ ಮುಕ್ತರ ಮಾಳ್ಪ ಸಂತೋಷ ನರಕ ಯಾ । ತನಗಳಿಲ್ಲಿದರಿಂದ ಅವರಿಗೆಂದೆಂದೂ ॥ ೫ ॥ ಮನುಜಾಧಮರಿಗೆ ಹರಿದಾಸನಲ್ಲೆ ದ್ವೇಷ। ವೆನಿಪ ಸಾಧನವೆ ನಿಸ್ಸಂದೇಹವು ॥ ಅನುತಾಪಕೆಡಿಸಿ ಹರುಷಿತರಾಗಿ ನಿಪ್ರಯೋ । ಜನದಿಂದ ಹರಿಪಾದ ಭಜಿಪ ಭಕತರಿಗೆ ॥ ೬ ॥ ಈಕಲಿಯುಗದೊಳಿವರ ನಿರ್ಮಿಸಿದ ಹರಿತಾನು । ಭೂಕೋವಿದರ ಮಲವು ಪೋಗಲೆಂದು ॥ ಶ್ರೀಕರಾರ್ಚಿತ ಜಗನ್ನಾಥವಿಠಲ ಗ್ರಾಮ । ಸೂಕರರು ನಿಂದಕರು ಕರುಣಾಳು ಇಳೆಯೊಳಗೆ ॥ ೭ ॥ ಶ್ರೀಃ ॥

## ೧೩೪. ರಾಗ ರೇಗುಪ್ತಿ, ಅಟತಾಳ.

ಯತಿಕುಲಾಂಬುಜ ನಿಜತರಣೀ । ಪದಾ । ನುತಿಪೆ ಸಜ್ಜನರಿಗೆ ದೊರೆಯುವ ಕರುಣೀ ॥ ಕ್ಷಿತಿಯೊಳಗೆ ಮಣಿಮಂತ ಮೊದಲಾ। ದತಿ ದುರಾತ್ಮರ ತತಿಯ ಖಂಡಿಸಿ । ವಿತತನಿಜ ಹರಿಮತವೆ ಸ್ಥಾಪಿಸಿ । ದತುಳಮಹಿಮನೆ ಸತತ ಸ್ಮರಿಸುವೆ ॥ ಪಲ್ಲ ॥ ಹನುಮ ಭೀಮ ಮಧ್ವರಾಯ । ಯೆಂದು । ತನುತ್ರಯದಿಂದಲಿ ಜನಿಸಿದ್ಯೋ ಪ್ರೀಯ ॥ ವನಜಸಂಭವ ತಾಯಿ ಕಾಯ । ನೋಡಿ । ದನುಜದಲ್ಲಣರ ಕೊಂದನು ಭೀಮರಾಯ ॥ ದಿನಕರಾಂಶಜ ಪಾದಕಮಲಕೆ। ಹನುಮ ಭಾಸ್ಕರನೆನಿಪ ಭೀಮನು। ಮನದಿ ಕೃಷ್ಣನ ನೆನೆವ ವ್ಯಾಸರ। ತನುಜ। ನೆನಿಸಿಯೆ ಜಗದಿ ಮೆರೆದ್ಯೋ ॥ ೧ ॥ ರಾವಣಾಂತಕ ವೀರಹನುಮಾ । ದುಷ್ಟ । ಶೈವಾರಗ್ರಾಣಿಜರ ಸಂಹಾರಿ ಭೀಮ। ಪಾವನಾತ್ಮಕ ಮಧ್ವನಾಮಾ। ತಾನೆ। ದೈವನೆಂಬುವ ಸಂಕರನ

ನಿರ್ಧೂರ್ಣವಾ ॥ ದೇವನನುಜಗೆ ಜೀವವಿತ್ತನೆ । ದೇವಿ ಮೊರೆಯಿಡಲು ಕೇಳಿ ಕುರುಕುಲ । ಜೀವಹನನವ ಗೈದ ಭೀಮನೆ । ಶೈವಶಾಸ್ತ್ರವ ಮುರಿದ ಮಧ್ವನೆ ॥ ೨ ॥ ಜಗಕೆ ಜೀವನೆನಿಪ ಪ್ರಾಣಾ । ದೇವ । ನಗವೈರಿಸುತ ನಿಗೆ ನಿರುತ ಸತ್ರಾಣಾ ॥ ಬಗೆಬಗೆ ವಿಧದ ಪ್ರಮಾಣಾ । ಮಾಡಿ ಜಗದಿ ಮೆರೆದ್ಯೋ ಪದವಾಕ್ಯ ಪ್ರಮಾಣಾ ॥ ಮುಗಿವೆ ಹಸ್ತದ್ವಯವ ಶಾಖಾ । ಮೃಗ ನರಾಧಿಪ ನಿಗಮ ನಿರ್ಣಯ ॥ ಜಗಕೆ ಗುರು ಜಗನ್ನಾಥವಿಠಲನ । ವಲುಮೆ ಪಡದು ಜಗದಿ ಮೆರೆದ್ಯೋ ॥ ೩ ॥ ಶ್ರೀಃ ॥

೧೩೫. ರಾಗ ಕಾಂಬೋಧಿ, ಝಂಪೆತಾಳ.

ಕೀಚಕಾಂತಕ ಭೀಮಸೇನರಾಯ । ಯೋಚಿಸುವೆ ನಿನಗಾನು ಯೆಲ್ಲ ರನ್ನು ಸಲಹೆಂದು ॥ ಪಲ್ಲ ॥ ಕುಂತಿಜಠರೋದ್ಭವನೆ ಕುವಲಯದೊಳಿಪ್ಪ ಮ । ಹಂತರಿಗೆ ಬಪ್ಪ ಜನ್ಮಾದಿರೋಗ । ಚಿಂತೆಗಳ ಕಳೆದು ನಿಶ್ಚಿಂತರನು ಮಾಡು ಸ । ರ್ವಾಂತರಾತ್ಮಕ ಸುಖದ ಸರ್ವೇಶ ಶಕ್ರಾದಿನುತ ॥ ೧ ॥ ದ್ರೌಪದೀರಮಣ ಜ್ಞಾತಾಜ್ಞಾತಕರ್ಮಜ ಮ । ಹಾಪರಾಧಗಳೆಣಿಸ ದನುದಿನದಲೀ ॥ ನೀ ಪೊರೆಯಬೇಕುಪೇಕ್ಷಿಸದೆ ನಿನ್ನವರ ವಿ । ಜ್ಞಾಪನವ ಕೈಕೊಂಡು ವಿಶ್ವಚೇಷ್ಟಕನೇ ॥ ೨ ॥ ಕೌರವಾಂತಕನೆ ಕಾಶ್ಯಪಿಸು ತರ ಸಂತೈಪ । ಭಾರ ನಿನ್ನದು ಭವದಿ ಭಕ್ತಬಂಧೋ ॥ ಪ್ರೇರಕಪ್ರೇ ರ್ಯರೂಪಗಳಿಂದ ಸರ್ವರ ಶ । ರೀರದೊಳಗಾಡುವೆ ದೇವತೆಗಳೊ ಡನೆ ॥ ೩ ॥ ಪವಮಾನತನಯ ಪಾಪಿಷ್ಠರೊಳಗಿದ್ದು ನಿ । ನ್ನವರನೀಪರಿ ಪಣಿಸಿ ನೋಡುತಿಹದೂ ॥ ಭುವನತ್ರಯೇಶಭೂಷಣವೇನೊ ನಿನಗೆ ಸ । ತ್ಯವತಿಕುಲೋತ್ತಂಸ ಕಾವರ ಕಾಣೆ ನಿನ್ನುಳಿದು ॥ ೪ ॥ ದನುಜಾಂತಕನೆ ನಿನ್ನ ದಯವು ಒಂದಿರಲು ಮನೆ । ಧನಧಾನ್ಯ ಪಶುಪತ್ನಿ ಜ್ಞಾನಭಕ್ತಿ ॥ ತನಗೆ ತಾನೊದಗಿಬಪ್ಪುದು ಸುನಿಶ್ಚಯ । ಸನಾ । ತನ ಜಗನ್ನಾಥವಿಟ್ಠಲ ನೊಲುಮೆ ಪಾತ್ರಾ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೩೬. ರಾಗ ಬಿಲಹರಿ, ಝಂಪೆತಾಳ.

ಕಾವೇರಿ ಕಲುಷಾಪಹಾರಿ । ಪಾವನ ಶರೀರಿ ಶುಭತೋಪಕಾರಿ ॥ ॥ ಪಲ್ಲ ॥ ಶ್ರೀವಾಸುದೇವ ರಂಗೇಶನಾಲಯಕೆ ನೀ । ನಾವರಣಳಾಗಿಪ್ಪೆ ವಿರಜೆಯಂತೇ ॥ ದೇವಋಷಿಗಂಧರ್ವ ಪಿತೃಪನರವರರಿಂದ । ಸೇವಸೀಯಳಾಗಿ ಸರ್ವಾರ್ಥ ಪೂರೈಪೆ ॥ ೧ ॥ ಜಲಚರಾನ್ವೇಷಣಲುಬ್ಧ ಸಾಲಿಗ್ರಾಮ । ತುಲಸಿ ವೃಕ್ಷವನೆ ಕೊಡಿಸಿದ ಮಾತ್ರದೀ ॥ ಕಲುಷರಾಶಿಗಳೆಲ್ಲ ಕಳೆದು ಮುಕ್ತಿಯನಿತ್ತೆ । ಸಲಿಲವಾದಿರೆ ನಿನ್ನ ಕರುಣಕೇನೆಂಬೆ ॥ ೨ ॥ ರವಿತುಲಾರಾಶಿಗೈದಿದ ಸಮಯದೊಳಗೊಂದು । ದಿವಸ ಮಜ್ಜನಗೈವ ಮಾನವರಿಗೆ ॥ ಪವನಾಂತರಾತ್ಮಕನ ಪಾದಕಮಲವ ತೋರಿ । ಭವಜರೋಗವ ಕಳೆದು ಭಾಗ್ಯವಂತರ ಮಾಳ್ಪೆ ॥ ೩ ॥ ಶ್ರೀಪವನಶಿವರಿಂದ ತಾ ಪೂಜೆಗೊಳುತ ಬಹು । ರೂಪಗಳ ಧರಿಸಿಕೊಂಡಾಪರಮನೂ ॥ ವ್ಯಾಪಿಸಿಹ ನಿನ್ನೊಳದ್ಯಾಪಿ ಸ್ವರ್ಗಸ್ಥ ಜನ । ರೀಪೊಡವಿಯೊಳು ತವ ಸಮೀಪದಲಿ ಜನಿಸುವರು ॥ ೪ ॥ ಮೂಢಮತಿ ನಾನು ಕೊಂಡಾಡಬಲ್ಲೆನೆ ನಿನ್ನ । ಬೇಡಿಕೊಂಬೆನು ಹೃದಯಪೀಠದೊಳಗೇ ॥ ಗೂಢಪದಶಯನ ಜಗನ್ನಾಥವಿಟ್ಠಲನಂಘ್ರಿ । ನೋಡುವ ಸೌಭಾಗ್ಯ ದಯಮಾಡು ಪ್ರತಿದಿನದಲ್ಲಿ ॥ ೫ ॥

## ನದಿಗಳ ತಾರತಮ್ಯ.

೧೩೭. ರಾಗ ಭೂಪಾಳಿ, ಝಂಪೆತಾಳ.

ಭಾಗೀರಥ್ಯಾದಿ ನದಿಗಳ ತಾರತಮ್ಯ ನಿಜ । ಭಾಗವತತಿಲಕ ನಿಮಿರಾಜಗೊಲಿದು ವಸಿಷ್ಠ । ಯೋಗೀಶ ಪೇಳ್ದ ಸುಕಥಾ ಕುತೂಹಲವನ್ನು । ರಾಗದಲಿ ಕೇಳಿ ಜನರು ಅಯ್ಯಾ ॥ ಒಂದು ದಿನ ಗೋದಾವರಿಯ ತಟದಿ ನಿಮಿರಾಜನಿಂದು ಯಜ್ಞವ ಮಾಡುತಿರಲಾಗ ಪರಮೇಷ್ಠಿ । ನಂದನನೆನಿಪ ವಸಿಷ್ಠಮುಹಮುನಿ ನಡೆ । ತಂದ ಮೇಧಾಗಾರಕೇ ॥ ಬಂದ ಯತಿವರನ ಮಣಿಪೀಠದಲಿ ಕುಳ್ಳಿರಿಸಿ । ಮಂದಹಾಸದಲಿ ತನ್ನಯ ಮನೋವಾಂಛಿತ ವಸುಂಧರಾಧಿಪ ಬೆಸಸಿದಾ ॥ ೧ ॥ ವ್ರತಿಪತಿ ವಸಿಷ್ಠ ವೈಷ್ಣವಕುಲಶಿರೋರತುನ । ಶ್ರುತಿಶಾಸ್ತ್ರ ಸರ್ವಜ್ಞ ಗಂಗಾದಿ ಪುಣ್ಯಾ ।

ಕ್ಷೇತ್ರ ತಾರತಮ್ಯ ಎನಗರುಪು ಕರುಣದಲಿ ಮ। ಶ್ರಿತನೆನುತ ಪದಕೆರಗುವಾ । ಕ್ಷಿತಿಪನೋಕ್ತಿಯ ಕೇಳುತಾನಂದಶರಧಿಯೊಳು । ಗತನಾಗಿ ರೋಮಲಕ್ಷಣ ಕಳೇವರದಿ ಪುಳಕಿತವಾದವನ ಕಾರುಣ್ಯದಲಿ ಯತಿವನು। ನ್ನತ ನೃಪತಿಗಿಂತೆಂದನೂ ॥ ೨ ॥ ಕೇಳು ಜನನಾಥ ಮಹಾಭಾಗ ನಿನ್ನಯ ಪ್ರಶ್ನ। ದೇಳಿಗೆಗೆ ಎನ್ನ ಸಂತೋಷ ಕಲ್ಪತರು ತ। ತ್ಕಾಲ ಉದಿಸಿ ಫಲೋನ್ಮುಖವಾಯಿತು ಶಿಷ್ಯರೊಳು । ಮೌಳಿಮಣಿ ನೀನಹುದೂ ॥ ಮಾಲತಿ ಮೊದಲ್ಗೊಂಡು ನಿಖಿಲನದಿಗಳೊಳಿಪ್ಪ। ಶ್ರೀಲೋಲನ ಸುಮೂರ್ತಿಗಳು ತಾರತಮ್ಯ ಸುವಿ। ಶಾಲವ ನಿನಗೊರವೆ ಮನವ ಚಂಚಲಿಸದಿ। ದಾಲಿಪುದು ನೀನೆಂದನು ॥ ೩ ॥ ಹರಿಪಾದನಖದ ಸಂಸ್ಪರ್ಶ ಮಾತ್ರದಿಂದಲಿ। ಸುರತರಂಗಿಣಿ ಶ್ರೇಷ್ಠಳೆನಿಸುವಳು ನದಿಗಳೊಳು। ದರರಥಾಂಗಗದ್ಧಾವಿಧೃತಪಾಣೀ ಮಾಧವನು। ಧೊರೆಯೆನಿಪನಾತೀರ್ಥಕೆ॥ ಸರಿತಾಗ್ರಗಣ್ಯ ಗೋದಾವರಿ ನಳಿನಿಗಿಂ। ಕೊರತೆಯನಿಪಳೈವತ್ತು ಗುಣದಲಿ ಶಂಖ। ಚರಣ ಸುಗದಾಬ್ಜ ಶೋಭಿತ ವೀರ ನಾರಾಯ। ಣರಸೆನಿಪನಾಸಲಿಲಕೇ॥ ೪ ॥ ಹರಜಟೋದ್ಭವ ಕುಶಾವರ್ತಿಗೆ ಸಹಸ್ರಗುಣ। ವರಳೆನಿಪ ಕೃಷ್ಣಾಖ್ಯಾಸ್ಯಂದನದಿ ಚಾರುಕಂ। ಬುರುಲಿವಾರುಚಿ ಧನುರ್ಧಾರಿಯುಮನಂದನಲಿ।ಹರಿಸುತಿಹನಾಜಲದೊಳು॥ ತುರುಗಾಯ್ದ ದೇವನಂಗಜನದಿಗೆ ಈರೈದು। ನೆರೆ ಗುಣವಿರುವ ಹೀನವಾಗ್ದೇವಿ ಶರಧಿಯೊಳು ಪು। ಷ್ಕರನಾಭ ಆಪರಸ್ಪತೀ ಸಮಳು ಕಾವೇರಿ ಗೋದ। ರಂಗನಾಥನೆನಿಪ ॥ ೫ ॥ ಆಯಮಳನದಿಗಳಿಗೆರಡು ಗುಣಾಧಮ ಸರಯುತೋಯಾಧಿಪತಿರಾಮಸರಯು ನೀರೊಂದು। ಗುಣದಿ। ಯಮುನೆ ಕಡಿಮೆನಿಪಳಲ್ಲಿ। ದಾಮೋದರ ವಿಹಾಯುಸಮಣಿತನಯಳಿ। ಹೇಯುವೆಂದೆಂಬೊದೊಂದೆರಡು ಗುಣ ನರ್ಮದಾ। ಸ್ಥಾಯಕ ಚತುರ್ಬಾಹು ವಿಷ್ಣುಕಾವೇರಿಗೆ। ರಾಯಕೇಳ್ವರಾಹಿ ನೀರೊಂದು ಗುಣ ಕಡಿಮೆ। ನಾಯಕ ವರಾಹದೇವಾ ॥ ೬ ॥ ಸಿಂಧುಭವನಾಶಗೀರ್ವರು ಸಮರು ಕ್ಷೀರಾಬ್ಧಿ। ಮಂದಿರ ನೃಸಿಂಹರಲ್ಲಿಹರು ಭವನಾಶನಿಗೆ ಸುಂದರ ಕುಮುದ್ವತಿಯು ಕಿಂಚಿದ್ಗುಣಾಧಮಳು। ತಂದೆಯೆನಿಪ ತ್ರಿವಿಕ್ರಮಾ ॥ ವಂದೆನಿಸುವವು ನಾಲ್ಕು ನದಿಗಳು ಗುಣಗಳಿಂದ।

ಮುಂದಿಹ ಪದದಿ ಪೇಳ್ವೆ ಪೆಸರು ಹರಿರೂಪ ನಲ। ವಿಂದಲಿ ಶ್ರೀಮಂತ ನೆನುತ ಕರುಣದಲಿ ತಮ್ಮಂದೀರಗಿಂತೆಂದನೂ ॥ ೭ ॥ ವಾಜಿವದನನು ವಂಝುರಾನದಿಯೊಳಿಹನು ನವ । ರಾಜೀವನಯನ ಶ್ರೀಧರಭೀಮರಥಿ ಯೊಳಿಹ । ರಾಜಶಯನಾನಂತ ತಾಮ್ರಪರ್ಣಿಯೊಳಗೆ ವಿ । ರಾಜಿಪ ಮಲಾಪಹಾರಿ ॥ ಭಾಜನದೊಳಿಪ್ಪ ದುಷ್ಟಜನರನು ಮರ್ದಿಸುವ । ಶ್ರೀಜ ನಾರ್ದನ ನಾಲ್ಕುನದಿಗಳು ದ್ವಿಗುಣದಿಂದಾ । ಈಜಗತಿಯೊಳಗಧಮರೆನಿ ಸುತಿಪ್ಪರು ನಿತ್ಯ । ನೈಜಭಕ್ತಿ ಜ್ಞಾನದೀ ॥ ೮ ॥ ಭೀಮರಥಿ ಸಮ ಪಿನಾ ಕಿನಿಯೊಳಗೆ ಕೇಶವನು। ಭೂಮಿಯೊಳು ಪೃಥಕು ಪೃಥಕು । ಸಾಮಾನ್ಯ ವೆನಿಪವು ಪಿನಾಕಿನಿಗೆ ತಮ್ಮೊಳು । ಪಮೊಪ್ಪುತ ಸುಖಜ್ಞಾನದಿ ॥ ಶ್ರೀಮ ನೋರಮ ಕೇಶವಾದಿ ರೂಪಗಳಿಂದ। ಸ್ವಾಮಿಯೆನಿಸುವನಲ್ಲ ಸ್ನಾನಾದಿ ಸತ್ಕರ್ಮ । ಧೀಮಂತರಾಚರಿತೆ ಪ್ರತಿದಿನದಿ ಧರ್ಮಾರ್ಥ । ಕಾಮಮೋ ಕ್ಷಗಳೀವನೂ ॥ ೯ ॥ ಈನದಿಗಳೆರಡುಗುಣ ಪುಷ್ಕರಣಿ ನಿಚಯ । ನ್ಯೂನ ವೆನಿಪವು ಮುಕ್ತಿದತ್ತಾತ್ರಯನು ಕೃಷ್ಣ । ವೇಣಿಗೆ ಸಮಾನ ಚಂದ್ರಸ್ವಾಮಿ ಪುಷ್ಕರಣಿ । ಮಾನಸಸರೋವರದೊಳು ॥ ಜ್ಞಾನಾತ್ಮ ವಾಮನನ ಶ್ರೀಭೂ ಸಹಿತ ಪ್ರಪ। ಸ್ನಾನನಾಬ್ಜದಿದರ ಜಘನಸ್ಥಿತಾಭಯ ಪ। ಪಾಣಿ ವೆಂ ಕಟನ ಮಧುಸೂದನನ ತ್ರಿಸ್ಥಳದಿ । ಧ್ಯೇನಿಪುದು ಯೆಂದಾ ॥ ೧೦ ॥ ದೇವ ಖಾತಗಳು ಶತಗುಣ ಕಡಿಮೆ ಮಾನಸಸ। ರೋವರಕೆ ಇತರ ಪುಷ್ಕರಣಿ ಗಳಿಗಲ್ಪಗುಣ । ಭಾವಿಸುವದಲ್ಲ ಪುಗದಾಧರನ ಪಾಪಿಗಳ । ಪಾವನವ ಗೈವ ಕ್ಷಾದಾ ॥ ಪ್ರಾವಹಿಗಳೀರೈದು ಗುಣದಿಂ ಕಡಿಮೆ ಲಕ್ಷ್ಮೀ । ದೇವಿ ಪತಿ ನಾರಾಯಣನ ಚಿಂತಿಸೆಂದು ನೃಪ । ಗಾವಸಿಷ್ಠಮುನೀಶ ಪೇಳ್ದ ಶೀಘ್ರದಲಿ ಭವ। ನೋವು ಪರಿಹರಿಪುದೆಂದು ॥ ೧೧ ॥ ಈಸಲಿಲತೀರ್ಥಂಗ ಳೆರಡುಗುಣದಿ ತಟಾಕ । ಶೇಷಪರ್ಯಂಕ ಅಚ್ಯುತನಿಹನು ಸಜ್ಜನರ । ದೋಷಗಳ ಕಳೆವ ವಾಪಿಗಳೆರಡುಗುಣ ಕಡಿಮೆ । ವಾಸವಾಗಿಹನು ಚಕ್ರಿ ॥ ಘೋಷಗೈವಧರಾಂತ ಕೂಪಗಳೊಳಿರುತಿಹ ನೃ । ಪೇಶ ನದಿಗಳ ತಾರ ತಮ್ಯ ರೂಪಗಳನುಪ । ದೇಶಿಸಿದೆ ಸರ್ವವು ನಿನಗೆ ಮಹಾರಹಸ್ಯವಿದು । ಪಾಸನವ ಗೈವದೆಂದು ॥ ೧೨ ॥ ಈತೆರದಿ ನಿಮಿರಾಜಗೋಸುಗ ವಸಿಷ್ಠ

ಮುನಿ । ತಾ ತಿಳಿದ ಕಥಾತಿಶಯವ ಪರವು ವಿಬುಧರು ಧ । ರಾತಳದೊಳಿಪ್ಪ ತೀರ್ಥಗಳಲ್ಲಿ ಸ್ನಾನ ಜಪ । ಪ್ರೀತಿಯಿಂದಾಚರಿಸಲು ॥ ಶೀತಾಂಶು ಕಮಲಾಪ್ತರುಳ್ಳನಕ ಸುರಪತಿ ನಿ । ಕೇತನದಿ ವಿವಿಧ ಭೋಗಗಳಿತ್ತು ತ್ರೀಜಗ । ನ್ನಾಥವಿಟ್ಠಲ ಪಾಲಿಸುವನು ತನ್ನವರ ಸಂ । ಪ್ರೀತಿಯಿಂದ ಸುರಾಗದೀ ॥ ಕೇಳಿ ಜನರು ಆಯಸ್ಸ್ಯಾ ॥ ೧೩ ॥ ಶ್ರೀಃ ॥

## ೧೩೮. ರಾಗ ಭೈರವಿ, ಅಟತಾಳ.

ಕೃಷ್ಣನ ನೋಡಿರೆ । ಭಕ್ತಿ । ತುಷ್ಟನ ಪಾಡಿರೆ । ಕೃಷ್ಣಾಗೆ ಒಲಿದಾರೆ ದುಷ್ಟರಾಯರನಾ । ತರಿದ । ಜಗದೊಳು ಮೆರೆದಾ ॥ ಪಲ್ಲ ॥ ನಂದಾವ್ರಜಾದಲ್ಲಿ ಕಂದನಾಗಿ ತಾ ಬೆಳೆದ । ದೈತ್ಯರನಳಿದಾ । ವೃಂದಾವನದೊಳು ಇಂ-ಗಾಮುಖಿಯರನು ಕೂಡಿ । ಪರಿಪರಿಯಾಡಿ । ಒಂದೊಂದುಪರಿ ಲೀಲೆ ಸಂದೋಹಗಳ ತೋರಿಸಿದಾ । ಮೋಹ ಬೆರಸಿದಾ । ಕಂದರ್ಪಪಿತ ತನ್ನ ಹೊಂದಿದ ಜನರನ್ನು । ಕಾವಾ । ವರಗಳನೀವಾ ॥ ೧ ॥ ಬಾಲೇರ ಮನೆಯಲ್ಲಿ ಪಾಲುಮೊಸರುಗಳ ಕದ್ದಾ ತೀರದಿ ಮೆದ್ದಾ । ಕಾಲಕಾಲದಲಿ ಗೋಪಾಲರ ಒಡಗೂಡಿ । ಗೋಪಾ ಕಾಯ್ದನು ದೇವಾ । ಶೀಲಜ ಬೆರಳಲಿ ತಾಳಿ ಗೋಕುಲವ ಪೊರೆದ । ಗರುವವ ಮುರಿದ ಶ್ರೀಲೋಲುಪನು । ವಿಶಾಲ ಮಹಿಮೆಗಳ ತೋರಿದ ಸುರರಿಂದ ಮೆರೆದಾ ॥ ೨ ॥ ಮಧುರಾಪಟ್ಟಣದಿ ಕಪನಕರ್ಕಶರ ಕೊಂದ । ಸಚ್ಚಿದಾನಂದಾ । ಸದುಗುಣನಿಧಿಯು ಪಡದವಳ ಜನಕಗೆ ಪಟ್ಟಗಟ್ಟಿದ ಧಿಟ್ಟಾ । ಸುದತಿಯಗೋಸುಗ ಸುಧಪಾಸಿಯ ಪುರದಿಂದ ಸುರತರು ತಂದ । ಪದುಮಜಾಂಡಧರ ಜಗನ್ನಾಥ ವಿಠಲನೀತಾ । ತ್ರಿಗುಣಾತೀತಾ ॥ ೩ ॥ ಶ್ರೀಃ ॥

## ೧೩೯. ರಾಗ ಸಾವೇರಿ, ಅಟತಾಳ.

ನಿನ್ನ ನಂಬಿದೆ ರಾಘವೇಂದ್ರ । ನೀ । ಎನ್ನ ಪಾಲಿಸು ಸುಯಮೀಂದ್ರ । ಸನ್ನುತ ಸರಸಕವೀಂದ್ರ । ಪ್ರ । ಪನ್ನ ಹೃತ್ಕುಮುದಸುಚಂದ್ರ । ಭಾರತೀಶ ಪದಾಬ್ಜ ಭೃಂಗ । ಖ । ರಾರಿಯ ಕರುಣ ತರಂಗ । ಸಾರಿದವರ

ಭವಭಂಗ । ಸ । ವಿಸಾರ ಮತಾಂಬುಜ ಪತಂಗ ॥ ೧ ॥ ಭೇದವಾತಾಬ್ಧಿ ವಿಹಾರ । ಕು । ವಾದಿ ಮದವನ ಕುಠಾರ । ಸಾಧಿತ ಖಿಳತತ್ವಸಾರ । ಮಧು । ಸೂದನ ಚಂದ್ರಚಕೋರ ॥ ೨ ॥ ಸುಧೀಂದ್ರ ಕರಕಂಜ ಜಾತ । ವಿ । ಬುಧಸಂಗ ಸತತ ಸಮೇತ । ವಿಧಿಪಿತ ಗುರುಜಗನ್ನಾಥ । ವಿಠಲ । ನಧಿಕನೆಂದೊರದ ವಿಖ್ಯಾತ ॥ ೩ ॥ ಶ್ರೀ ॥

## ೧೪೦. ರಾಗ ಭೂಪಾಳಿ, ಝಂಪೆತಾಳ.

ಸ್ಮರಿಸಿ ತೀರ್ಥಕ್ಷೇತ್ರವಾ ॥ ಸ್ಮರಿಸಿ ತೀರ್ಥಕ್ಷೇತ್ರ ಸಜ್ಜನರು ನಿತ್ಯದಲಿ । ಅರುಣೋದಯದಲೆದ್ದು ಭಕ್ತಿಪೂರ್ವಕವಾಗಿ । ಕರಣಕ್ರಮದಿ ಮಾಳ್ಪ ಪಾಪರಾಶಿಗಳ ಪರಿಹರಿಸುತ್ತ ಸಂತೈಸುವಾ ॥ ಪಲ್ಲ ॥ ಭಾಗೀರಥಿ ಸರಸ್ವತಿ ಯಮುನ ವಾರಣಾ । ಶ್ರೀಗೋದ ಫಲ್ಗುನಿ ಶೋಣಾಭದ್ರಾ ನರ್ಮದಾ । ದಾಗಂಡಕಿ ಭೀಮರಥಿ ತುಂಗಭದ್ರೆ ಪ್ರ । ಯಾಗ ತ್ರಿವೇಣಿ ಹೇಮಾ ॥ ವೇಗವತಿ ಗಾಯತ್ರಿ ಕೌಶಿಕಿ ಮಣಿಕರ್ಣಿ । ಕಾಗೌತಮಿ ವಿಯದ್ಗಂಗಾ ಕುಮುದ್ವತೀ । ಕಾಗಿನೀ ನೇತ್ರಾವತೀ ಹೈಮಸಿಂಧು ಪಾಪೌಘ ನಾಶೀ ॥ ೧ ॥ ಸರಯುಜಯಮಂಗಳ ಜಮದಗ್ನಿ ವರತಾಂಬ್ರ । ಪರಣಿ ಯೋಗಾನಂದ ಕೃತಮಾಲ ಕುಹು ಮಹೀ । ಶ್ವರಿ ಶಂಖಚಕ್ರವತಿ ಭವ ನಾಶಿನಿ ಗದಾ ॥ ಧರ ಮೇನಕಾಧುನಾಶಿ ಗರುಡ ಮದಿರಾ । ಮರುದ್ವತಿ ಸ್ವರ್ಣಮುಖರಿವರಿಝರ ತಾಪಿನಿ ಕಾಳಿ ಸೌ । ಪರಣಿ ದಕ್ಷಿಣೋತ್ತರ ಪಿನಾಕಿ ಕಪಿಲ ಶೀತಾಳಕಾನಂದ ಕುರಮುಖಿ ಪ್ರಣವಸಿದ್ಧ ॥ ೨ ॥ ಕಾವೇರಿ ಸಿಂಧು ಮಾಲತಿ ಗಾರ್ಗಿಣಿ ಹರಿ । ದ್ರುವತಿ ಇಂದ್ರಾಣಿ ಕುಂದಕುಂತಿಸಿ ಶೈವ । ದೇವವತಿ ಪಾತಾಳಗಂಗಾ ಪುನಹ ನೀರಾಕುಮಾರಧಾರೆ ॥ ಸಾವಿತ್ರಿ ಧಾನ್ಯಮಾಲಾ ಪುಷ್ಪವತಿ ಲೋಕ । ಪಾವನಿ ಮೌಳಿ ಮೌಕ್ತಿಕ ಸಿಂಧು ಧರ್ಮಕು । ಶಾವಂತಿನಿ ಚಕ್ರತೀರ್ಥ ಭವನಾಶಿನಿ ವರದಾ ಮಲಾಪಹಾರಿ ॥ ॥ ೩ ॥ ಸ್ವಾಮಿಪುಷ್ಕರಣಿ ಮಾನಸ ಚಂದ್ರಪುಷ್ಕರಣಿ । ಭೂಮಂಡಲದೊಳುತ್ತುಮೋತ್ತುಮ ತ್ರಿಪುಷ್ಕರಣಿ । ಶ್ರೀಮಧ್ವ ನಿತ್ಯಪುಷ್ಕರಣಿ ಸೀತಾಪದ್ಮ ಸರ ಚಂದ್ರಭಾಗತೀರ್ಥ ॥ ವಾಮನ ಮಯೂರ ಸಂಪಾಸರೋವರ ಪುಣ್ಯಾ ।

ಧಾಮ ವ್ಯಾಸಸಮುದ್ರ ಧವಳಗಂಗಾ ಸುಸಾ। ಧ್ಯವೃತ ಸಮುದ್ರ ಗುರು ಭೀಮಸೇನ ತಟಾಕರೋಮ ಹರ್ಷಣತೀರ್ಥ ॥ ೩ ॥ ದ್ವಾರಕಾನಗರ ಸಾಲಗ್ರಾಮಟರ ಬದರಿ ಕೇ। ದಾರ ನರ ನಾರಾಯಣ ಶ್ರೀಮಜ್ಜಗನ್ನಾಥ ಶ್ರೀಮುಷ್ಟ। ಮೇರು ಪಾರ್ಶ್ವ ಮಂದರ ಸುಪಾರ್ಶ್ವ ಪೈನಾಕ ಕೈಲಾಸ ಕಂಚಿ॥ ಶ್ರೀರಂಗನಾಥ ನೈಮಿಷದ್ವೈ ತವನ ಚಂಪ। ಕಾರಣ್ಯ ಕಾಶಿ ಸಂಪಾ ವಂತಿಕಾಪುರಿ ಗೌರಿ ಮ। ಯೂರ ಸಿಂಹಾದ್ರಿ ಪಾಟಲ ಹರಿದ್ವಾರ ಭಾಯಾ ಪಿತ್ರೈ ॥ ೪ ॥ ಕೇದಾರ ಸಾಗರ ಮಂದಾಕಿನಿ ಕುಸುಮವತಿ । ಆದಿ ಸುಬ್ರ ಹ್ಮಣ್ಯ ಕೋಟೀಶ್ವರ ನಂದಿ। ಪಾದ ಕ್ರೌಂಚಾದ್ರಿ ಮಹಾನಂದಿ ಶಂಕರ ನಾಮ ನಾರಾಯಣ ನಿವರ್ತಿ ॥ ವೇದಪಾದ ಯಯಾತಗಿರಿ ಕಾಳಹಸ್ತಿ ಕಾ। ಮೋದಕೀ ಪಾಂಡುರಂಗಕ್ಷೇತ್ರ ಶ್ರೀವಿಷ್ಣು। ಪಾದ ಗಯ ಕಾಳೇಶ್ವರೀ ಹಸ್ತಿನಾಪುರಿ ಪಾಟಲೀ ಮಂತ್ರಾಲಯಾ ॥ ೬ ॥ ಗೋವರ್ಧನಾದ್ರಿ ಪೈನಾಕ ಮಂದರ ಮಲಯ। ಕೈವಲ್ಯನಾಥ ಕಾಶ್ಮೀರ ಜಾಂಬವತಿ ವೃಂ। ದಾವನ ಧನುಷ್ಕೋಟಿ ವಾತಪುರಿ ಕನ್ಯಾಕುಮರಿ ಕೈಲಾದ್ರಿ ವೃಷಭಾ॥ ಶ್ರೀವಿರೂಪಾಕ್ಷ ಕುಂದರನಂದ ಪುರಿಮಾಯಾ । ಶ್ರೀವತ್ಸ ಗಂಧಮಾದನ ಚಿತ್ರಕೂಟ ದ್ವಾ। ರಾವತಿ ವ್ಯಾಘ್ರಪುರಿ ಗೋಕುಲ ಸರಾಚಲಾ ಸೌಭದ್ರಿ ಆದಿನಾಥ ॥ ೭ ॥ ಈಮಹೀಮಂಡಲದೊಳಿಪ್ಪ ತೀರ್ಥಕ್ಷೇತ್ರ । ನಾಮಗಳ ಕಾಲತ್ರಯದಲ್ಲಿ ಸ್ಮರಿಸುತಿಹ । ಧೀಮಂತರಿಗೆ ಸಂಚಿತಾಪಘ ಪರಿಹಾರ ದಾನಂತರದಲಿ॥ ಸೋಮರ್ಕರುಳ್ಳನಕ ಸಕಲ ಭೋಗಗಳ ಸು । ತ್ರಾಮ ಲೋಕದಲುಣಿಸಿ ಕರುಣಾಳು ಪ್ರಾಂತ್ಯಕೆ ಸ್ವ । ಧಾಮ ಮುಕ್ತರಸ ಮಾಳ್ಪನು ಅಹುದು ಅಹುದೆಂದು ಸೂತ ಶೌನಕಗೆ ಪೇಳ್ದ ॥ ೮ ॥ ಈಭರತಖಂಡದೊಳಗುಳ್ಳ ತೀರ್ಥಕ್ಷೇತ್ರ । ವೈಭವಾಬ್ಜಭವಾಂಡ ಪೌರ ಣದೊಳಗೆ ಹರಿ। ನಾಭಿಸಂಭವ ಪೇಳ್ದ ನಾರದನಿಗಿನಿತೆಂದು ಪರಮ ಕಾರುಣ್ಯದಿಂದ ॥ ಸ್ತ್ರೀಬಾಲ ಗೋವಿಪ್ರ ಮಾತಾಪಿತೃಗಳ ಧನ । ಲೋಭ ದಿಂದಲಿ ಕೊಂದ ಪಾತಕವು ಪರಿಹರಿಸಿ। ಶ್ರೀಭೂರಮಣ ಜಗನ್ನಾಥ ವಿಟ್ಠಲ ಕೊಡುವ ಬೇಡಿದಿಷ್ಟಾರ್ಥಗಳನೂ ॥ ೯ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೧. ರಾಗ ಕೇದಾರಗೌಳ, ಝಂಪೆತಾಳ.

ಶ್ರೀಮಾರುತಾತ್ಮ ಸಂಭೂತ । ಹನುಮ । ಭೀಮ ಮಧ್ವಾಖ್ಯ ಯತಿ ನಾಥ । ಮೂಲರಾಮ ಕೃಷ್ಣಾರ್ಪಿತ ಸುಚೇತಾ ॥ ಮಮ । ಸ್ವಾಮಿ ಚಿತ್ತೈಸೆನ್ನ ಮಾತಾ ॥ ೧ ॥ ಅಂಜನಾದೇವಿಯ ಕುಮಾರ । ಎಮ್ಮ । ನಂ ಜಿಸುವ ಘೋರಸಂಸಾರ । ಕ್ಲೇಶ । ಭಂಜಿಸಿ ಸಲಹೊ ಗುಣೋದಾರ । ಹೇಪ್ರ । ಭಂಜನನೆ ನಿಗಮಸಂಚಾರಾ ॥ ೨ ॥ ಕುಂತಿಯುದರದೊಳುದಿಸಿ ಬಂದೆ । ಮಾ । ಹಂತ ಕೌರವರ ನೀ ಕೊಂದೆ । ಅನಾ । ದ್ಯಂತಕಾಲದಿ ಎಮ್ಮ ತಂದೆ । ನೀನೆ । ಸಂತೈಸಬೇಕೆಂದು ನಿಂದೆ ॥ ೩ ॥ ಮಧ್ಯಗೇ ಹಾಖ್ಯ ದ್ವಿಜಸದನ । ದೊಳಗೆ । ಉದ್ಭವಿಸಿ ಮೆರದೆ ಜಿತಮದನ । ಧರ್ಮಪದ್ಧತಿಗಳು ಪ್ರಸನ್ನವದನಾ । ತಿಳಿಸಿ । ಉದ್ಧರಿಸೊ ದನುಜಕುಲ ನಿಧನಾ ॥ ೪ ॥ ಶ್ರೀಪೂರ್ಣಬೋಧಮುನಿರಾಯ । ಎಮ್ಮ । ತಾಪತ್ರಯ ಗಳಿಂದ ನೋಯಾ । ಗೊಡದೆ । ನೀ ಪಾಲಿಸು ಗುಣನಿಕಾಯಾ । ಕೃಷ್ಣ । ದ್ವೈಪಾಯನಗೆ ನೀನೆ ಪ್ರಿಯಾ ॥ ೫ ॥ ಬದರಿಕಾಶ್ರಮಕೆ ನೀ ಪೋಗಿ । ಲಕ್ಷ್ಮಿ । ಹೃದಯವಾಸನ ಪದಕೆ ಬಾಗಿ । ಭಾಷ್ಯ । ಮುದದಿಂದ ಪೇಳ್ದಿ ಚೆನ್ನಾಗಿ । ಎನಗೆ । ಅದರ ಭಾವವ ತಿಳಿಸೊ ಯೋಗಿ ॥ ೬ ॥ ಹನುಮ ಭೀಮಾನಂದಮುನಿಪ । ಕರುಣಿ । ಸನುದಿನದಿ ನಿನ್ನಂಘ್ರಿ ನೆನವ । ಮುದದಿ । ಘನವ್ರಾತ ಸತ್ಫಲಗಳುಣಿಪ । ಶಕ್ತ । ಜನನ ಮರಣವ ಬಿಡಿಸೊ ಜನಪಾ ॥ ೭ ॥ ಯಾರಿಗುಸುರಲಿ ಮನದ ತಾಪ । ಭಾರತೀರಮಣ ಮಹಪಾಪ । ವೆಣಿಸಿ । ದೂರ ನೋಳ್ಪರೆ ಸುಪ್ರತಾಪ । ಪರಮ । ಕಾರು ಣಿಕ ತೋರೊ ತವರೂಪ ॥ ೮ ॥ ಭಕ್ತರಿಗೆ ವಲಿದು ಭವದಿಂದ । ನಿ । ರ್ಮುಕ್ತರನ ಮಾಡು ದಯದಿಂದಾ । ನೀನೇ । ಶಕ್ತನಹುದೈ ವೇದ ವೃಂದಾ । ದೊಳಗೆ । ಉಕ್ತವಾಗಿದೆ ನಿಮ್ಮನಂದಾ ॥ ೯ ॥ ಜೀವಕೋಟಿ ಯೊಳು ನೀ ಪಿರಿಯ । ಎಮ್ಮ । ನೋವು ಸುಖಗಳ ನೀನೇ ಅರಿಯೆ । ಎಮಗೆ । ನೀನೊಲಿಯುದಿರಲು ಹರಿಪೊರೆಯಾ । ಜಗಕೆ । ಕಾಯ್ವ ಗುರು ವರ ನೀನೆ ಖರಿಯಾ ॥ ೧೦ ॥ ಶ್ರೀಜಗನ್ನಾಥವಿಠಲಯ್ಯಾ । ನಂಘ್ರಿ ।

ಪೂಜಿಸುವ ಸಜ್ಜನರ ಕೈಯ್ಯ । ಪಿಡಿದು । ನೀ ಜೋಕೆಮಾಡುವುದು ಜೀಯಾ । ನೀನೆ । ಈಜಗತ್ರಯಕೆ ಗುರುವರಿಯಾ ॥ ೧೧ ॥ ಶ್ರೀಃ ॥

ಗಳ೨. ರಾಗ ಪೂರ್ವಿಕಲ್ಯಾಣಿ, ಆದಿತಾಳ.

ದಯವಾಗೊ । ದಯವಾಗೋ । ದಯವಾಗೋ ॥ ಪಲ್ಲ ॥ ಹಯಮುಖ ಭಯ ಕೃದ್ಭಯನಾಶನ ಹರಿ ॥ ಅನುಪಲ್ಲ ॥ ಖರಮುರನರಕಾದ್ಯರ ಸಂಹರಿಸಿದ । ಪರಮಪುರುಷ ಸಂಹರ ಭವಹರನೆ ॥ ೧ ॥ ದ್ರೌಪದಿ ಮೊರೆ ಕೇಳ್ದಾಪದ್ಬಾಂಧವ । ನೀ ಪೊರೆದೆಮ್ಮ ರಮಾಪತಿ ನಿರುತ ॥ ೨ ॥ ಗೋಭೂಸುರರಿಗೆ ಭೂಭುಜರಾಭಯ ಪ । ರಾಭವಗೈಸುವ ಶ್ರೀಭೂರಮಣನೆ ॥ ೩ ॥ ಅಪ್ರಮೇಯ ನೀ ಕ್ಷಿಪ್ರದಿ ವಲಿದು ಜ । ಯಪ್ರದನಾಗುವ ಸುಪ್ರಹ್ಲಾದವರದನೆ ॥ ೪ ॥ ಶತ್ರುತಾಪನಾ ಜನತ್ರಯ ವ್ಯಾಪ್ತಾ ಪ । ವಿತ್ರ ಪಾಣಿ ಸರ್ವತ್ರಡಿ ಯೆಮಗೆ ॥ ೫ ॥ ಎಷ್ಟೆಂಥೇಳಲಿ ದುಷ್ಟಜನರು ಎನ್ನ । ಕಷ್ಟಬಡಿಪಬಗೆ ಜಿಷ್ಣುಸಾರಥೆ ॥ ೬ ॥ ಯಾತಕೆ ಯೆನ್ನನು ಭೀತಿಗೊಳಿಸಿ ಪುರು । ಹೂತನನುಜ ಜಗನ್ನಾಥವಿಠಲನೆ ॥ ೭ ॥ ಶ್ರೀಃ ॥

ಗಳ೩. ರಾಗ ಜಂಜೂಟಿ, ರೂಪಕತಾಳ.

ಕೊಳಲೇನು ಪುಣ್ಯವ ಮಾಡಿ ಕೃಷ್ಣನ । ಕರವನ್ನೈದಿತೇ ॥ ಪಲ್ಲ ॥ ಬಹಳುಗ್ರತಪವ ಮಾಡದಿಂಥ । ಭೋಗವಾದಿತೇ ॥ ಅನುಪಲ್ಲ ॥ ಧರಿಸಲ್ಹರಿಯು ಜಗವ ಮೋಹಿಪ । ಶಕುತಿ ಬಂದಿತೇ ॥ ಸ್ಮರನ ಬಾಧೆಯು ಆತನ ನುಡಿಗೆ । ಸ್ಮರಣೆಗೈದಿತೇ । ೧ ॥ ವಾರಿಜಾಕ್ಷನ ಮುಖರಿಗಿಂಥಾ । ಸಾಹಸ ಬಂದಿತೇ ॥ ಶ್ರೀರಮೆಯರಿಂಗೆ ಬಲವಾ । ದಸೂಯೇ ದೊರಕಿತೇ ॥ ೨ ॥ ಭುವನ ಸದನ ಜೀವರಿಗೆ ಪಾದಪವಾಳೀತೇ ॥ ಜಗನ್ನಾಥವಿಠಲನ ಮುಖರಿಗೆ ಶಬ್ದ । ವಿಲ್ಲಧೋಯಿತೇ ॥ ೩ ॥ ಶ್ರೀಃ ॥

## ಬೃಹತ್ತಾರತಮ್ಯ.

ಗಳಳ. ರಾಗ ಭೂಪಾಳಿ, ಝಂಪೆತಾಳ.

ಆನಮಿಪೆ ವಿಷ್ಣು ಶ್ರೀಬ್ರಹ್ಮ ವಾಯು । ವಾಣಿ ಭಾರತಿ ಮುಖ್ಯರವತಾರಾವೇಶಗಳ । ಗಾನಮಿಪೆ ॥ ಪಲ್ಲ ॥ ಶ್ರೀಮತ್ಸ್ಯ ಕೂರ್ಮ ಭೂವರಹ

ನರಸಿಂಹ ದಧಿ । ವಾಮನ ತ್ರಿವಿಕ್ರಮಾ ಪರಶುರಾಮಾ ॥ ರಾಮ ಯಾದವಕೃಷ್ಣ ಬೌದ್ಧ ಕಲ್ಕಿ ಹಯಾಸ್ಯ । ನಾಮ ತಾಪಸಮನು ಉಪೇಂದ್ರ ಅಜಿತಾದಿಗಳಿ । ಗಾನಮಿಪೆ ॥೧॥ ವಾಸುದೇವಾಚ್ಯುತಾನಂತ ಗೋವಿಂದ ಮಹಿ । ದಾಸ ಹರಿ ಹಂಸ ಧನ್ವಂತ್ರಿ ದತ್ತಾ ॥ ವ್ಯಾಸ ಕಪಿಲಾತ್ಮಾಂತರಾತ್ಮ ಪರಮಾತ್ಮ ಯ । ಜ್ಞೇಶ ವೈಕುಂಠ ನಾರಾಯಣಾದ್ಯವತಾರ । ಕಾನಮಿಪೆ ॥ ೨ ॥ ನಾರಾಯಣೀ ಋಷಭ ಐತರೇಯಾ ಶಿಂಶು । ಮಾರ ಯಜ್ಞ ಪ್ರಾಜ್ಞ ಸಂಕರ್ಷಣಾ ॥ ಕ್ಷೀರಾಬ್ಧಿನಿಲಯ ಯಮುನಂದನ ಕೃಷ್ಣ ಹರಿ । ನಾರಾಯಣಾದ್ಯಮಿತ ಧರ್ಮ ರೂಪಾದಿಗಳಿ । ಗಾನಮಿಪೆ ॥ ೩ ॥ ಗುಣಗಳಭಿಮಾನಿ ಶ್ರೀಭೂದುರ್ಗಾ ದಕ್ಷಿಣಾಂ । ಭೃಣಿ ಮಹಾಲಕ್ಷ್ಮಿ ಹ್ರೀವಿಷ್ಣುಪತ್ನಿ ॥ ಜನನಿ ಮಾಯಾಜಯಾಕೃತಿಶಾಂತಿ ಶುದ್ಧ ರು । ಗ್ಮಿಣಿ ಸತ್ಯೆ ಸೀತಾದಿ ಅಮಿತ ರೂಪಂಗಳಿಗೆ । ನಾನಮಿಪೆ ॥ ೪ ॥ ಹೀನಳೆನಿಸುವಳನಂತಾಂಶದಲಿ ಸುಖಬಲ । ಜ್ಞಾನದಿ ಗುಣದಿ ಮಹಲಕ್ಷ್ಮಿ ಹರಿಗೆ ॥ ಆನಂದ ವಿಜ್ಞಾನಮಯನ ವಕ್ಷಸ್ಥಳವೆ । ಸ್ಥಾನವಾಗಿಹುದು ಇಂದಿರೆಗೆ ಅವಾಗೂ । ಆನಮಿಪೆ ॥ ೫ ॥ ಪುರುಷನಾಮಕ ವಿಧಿ ವಿರಿಂಚ ಮಹದ್ ಬ್ರಹ್ಮ । ಸುರುಚಿ ಮುಖ್ಯಪ್ರಾಣ ಸೂತ್ರಸ್ಮೃತಿ ॥ ಗುರು ಮಹಾಪ್ರಭು ಋಜುಸಮಾನ ವಿಜ್ಞ ಪ್ರಾಜ್ಞ । ಹರಿಭಕ್ತಿ ಮೇಧಾವಿ ಮುಕ್ತಿ ಧೃತಿ ಅಮೃತನಿಗೆ ॥ ೬ ॥ ಸ್ಥಿತಿಯೋಗ್ಯ ವೈರಾಗ್ಯ ಚಿಂತ್ಯ ಬಲ ಸುಖ ಬುದ್ಧಿ । ವಿತತಾದಿ ಗೋಪ ಹನುಮಾನ ಭೀಮಾ ॥ ವೃತಿವರಾನಂದಮುನಿ ಮೊದಲಾದ ರೂಪ ಶ್ರೀ । ಪತಿಗಧಿಷ್ಠಾನ ಕೋಟಿ ಗುಣಾದಧಮರು ರಮೆಗೆ ॥ ೭ ॥ ಸರಸ್ವತಿ ಗಾಯತ್ರಿ ಬುದ್ಧಿ ವಿದ್ಯಾ ಪ್ರೀತಿ । ಗುರುಭಕ್ತಿ ಸರ್ವ ವೇದಾತ್ಮಕಿಭುಜಿ ॥ ಪರಮಾನುಭೂತಿ ಸಾವಿತ್ರಿ ಸುಸುಖಾತ್ಮಿಕಾ । ಪರಮೇಷ್ಠಿಪತ್ನಿ ನಾಮಗಳಿವೆಂದರಿದೂ ॥ ೮ ॥ ಶಿವಕನ್ಯೆ ಇಂದ್ರಸೇನಾಕಾಶಿಜಾ ಚಂದ್ರ । ಯುವತಿ ದ್ರೌಪದಿ ಭಾರತೀ ರೂಪವು ॥ ಪವಮಾನ ಬ್ರಹ್ಮರಿಗೆ ಶತಗುಣಾಧಮ ಸದಾ । ಶಿವನ ರೂಪಗಳ ಈಪರಿಯಲ್ಲಿ ಚಿಂತಿಸುತಾ ॥ ೯ ॥ ತತ್ಪುಮಾನ್ ಊರ್ಧ್ವಪಟ ದೂರ್ವಾಸ ವ್ಯಾಧ ಅ । ಶ್ವತ್ಥಾಮ ಜೈಗೀಷ ತಪ ಅಹಂಕೃತಿ ॥ ನಿತ್ಯ ವಾಯ್ವಾವಿಷ್ಟ ಶುಕ ವಾಮದೇವ

ಗುರು । ಮೃತ್ಯುಂಜಯರೌರ್ವ ಸದ್ಯೋಜಾತ ತತ್ಪುರುಷ। ಗಾನವಿಪೆ ॥ ೧೦ ॥ ನರ ವಾಯು ಶುಕ್ಲಕೇಶಾವೇಶ ಬಲಗೆ ಸಂ । ಕರ್ಷಣಾವೇಶ ಲಕ್ಷ್ಮ ಣದೇವಗೆ ॥ ಗರುಡ ಶೇಷನು ರುದ್ರಸಮರು ಶತಗುಣದಿಂದ । ಕೊರತೆ ಯೆನಿಸುವರು ಮೂವರು ವಾಣಿದೇವಿಂದಾ ॥ ೧೧ ॥ ಶೇಷಗೆ ಸಮಾನ ಳೆನಿಪಳು ಜಾಂಬವತಿ ರಮಾ । ವೇಶಕಾಲದಿ ಸಮಳು ಐವರಿಗೆ ಜಾಂಬ ವತಿ ॥ ವೀಶಾದ್ಯರಿಗೆ ಹರಿಸ್ತ್ರೀಯರಧಮರೈದುಗುಣ ॥ ೧೨ ॥ ರೇವತಿ ಶ್ರೀಯುತ ಶ್ರೀಪೇಯ ರೂಪತ್ರ । ಯಾವ ಕಾಲದಿ ವಾರುಣಿಗೆ ಪಾರ್ವತಿ ದೇವಿ ॥ ಸೌಪರಣಿ ಸಮ ಷಣ್ಮಹಿಷಿಯರಿಗೆರಡು । ಮೂವರೀರೈದುಗುಣ ಪತಿಗಳಿಗಧಮರೆಂದಾ ॥ ೧೩ ॥ ಕುಶವಾಲಿಗಾಧಿ ಇಂದ್ರದ್ಯುಮ್ನಾ ವಿಕು ಕ್ಷಿ। ಶ್ವಸನಹರಿ ಶೇಷಸಂಯುಕ್ತಾರ್ಜುನಾ ॥ ಅಶನೀಧರನ ಸುರೂಪಂ ಗಳಿವು ಮನ್ಮಥನ । ಪೆಸರು ಪೇಳುವೆನು ಅವತಾರಗಳ ನಿತ್ಯಾ ॥ ೧೪ ॥ ಪ್ರದ್ಯುಮ್ನ ಸಂಯುಕ್ತ ರುಗ್ಮಿಣಿದೇವಿಸುತ । ಪ್ರದ್ಯುಮ್ನ ಭರತನು ಸನ ತ್ಕುಮಾರಾ ॥ ಪದ್ಮಜಾವಿಷ್ಟ ಸಾಂಬಸ್ಕಂದ ಸುದರುಶನ। ರುದ್ರನರ್ಧಾಂ ಗಿನಿಗೆ ದಶಗುಣಾಧಮರೆಂದೂ ॥ ೧೫ ॥ ಕಾಮೇಂದ್ರರಿಗೆ ದಶಗುಣಾಧಮ ಅಹಂಪ್ರಾಣ । ನಾಮಕಗೆ ರೂಪ ಸರ್ವೋತ್ತುಂಗನೂ ॥ ಕಾಮಪುತ್ರಾನಿ ರುದ್ಧಾದಿಗಳು ದಶಹೀನ। ಈಮಹಾತ್ಮರ ದಿವ್ಯ ಅವತಾರ ರೂಪಗಳಿ। ಗಾ ನವಿಪೆ ॥ ೧೬ ॥ ತಾರನಾಮಕ ಪ್ಲವಗ ಬ್ರಹ್ಮಾಂಶಯುಗ್ದ್ರೋಣ । ಮಾ ರುತಾವೇಶ ಸಂಯುತವುದ್ಧವ ॥ ಮೂರುರೂಪವು ಬೃಹಸ್ಪತಿಗೆ ಪ್ರದ್ಯು ಮ್ನನ ಕು । ಮಾರಾನಿರುದ್ಧ ಶತ್ರುಘ್ನ ಅನಿರುದ್ಧನಿಗೆ ॥ ೧೭ ॥ ತಾರ ಚಿತ್ರಾಂಗದಾ ಶಚಿರೂಪಲಕ್ಷಣಾ । ಈರುಗ್ಮವತಿಗೆರಡು ರತಿರೂಪವು ॥ ಆರುಜನ ದಕ್ಷಸ್ವಯಂಭುವ ಮನುಪ್ರಾಣ । ಗೀರೈದುಗುಣಗಳಿಂದಧಮ ನೆಂದರಿದೂ ॥ ೧೮ ॥ ಭೂತಾಭಿಮಾನಿ ಪ್ರವಹ ಪಂಚಗುಣದಿ ಪುರು । ಹೂತ ಪತ್ನ್ಯಾದಿಗಳಿಗಧಮನೆನಿಪಾ॥ ಈತಗವತಾರವಿಲ್ಲವನಿಯೊಳು ಚಂ ದ್ರಪ್ರ। ದ್ಯೋತನಾಂತಕ ಸ್ವಯಂಭುವ ಪತ್ನಿಶತರೂಪಿ। ಗಾನವಿಪೆ ॥ ೧೯ ॥ ಸತ್ಯಜಿತು ಜಾಂಬವಾನ್ ವಿದುರ ಗುರುವಾಯು ಸಂ। ಯುಕ್ತ ಧರ್ಮಜ ಯಮಗೆ ರೂಪ ನಾಲ್ಕು ॥ ರಾತ್ರಿಕರನವತಾರಯಿಂದ್ರಯುಕ್ತಾಂಗದಾ

ದಿತ್ಯನವತಾರ ಬ್ರಹ್ಮಾನಿಷ್ಟ ಸುಗ್ರೀವ ಗಾನವಿಪೆ॥೨೦॥ ಹರಿಯುಕ್ತ ಕರ್ಣ ಮಾನುಷತ್ವಿ ಶತರೂಪ ನಾ । ಲ್ವರು ಸಮರು ಪ್ರವಹಗಿಂದೆರಡು ಗುಣದಿ॥ ಕೊರತೆ ಮಹಭೀಷ್ಟಕುಮಾಂಡೂಕ ಶಾಂತನು ಸುಷೇ । ಣ್ವರುಣರೂಪ ಶಶಾಂಕಗಧಮ ಷದಪಾದರ್ಧಗಾನವಿಪೆ ॥೨೧॥ ನಾರದಾಧಮ ವರುಣ ನಿಂದಲಿ ಅವ । ತಾರ ಧೃಷ್ಟದ್ಯುಮ್ನಲವನೀಲರು ॥ ಮೂರು ಭೃಗುರೂಪ ಜ್ವರನೆಂಬ ವ್ಯಾಧಪ್ರಸುಚಿ। ವಾರಿನಿಧಿಯಿಂದ ಪಾದಗುಣಾಧಮರೆಂದೂ॥ ॥ ೨೨ ॥ ಅಂಗಿರ ಪುಲಸ್ತ್ಯಾತ್ರಿಪುಲಹನು ಮರೀಚಿಮುನಿ । ಪುಂಗವ ವಸಿಷ್ಠ ಕ್ರತು ಬ್ರಹ್ಮಸುತರೂ ॥ ತುಂಗವಿಶ್ವಾಮಿತ್ರ ವೈವಸ್ವತರುಸದಾ । ಕೆಂಗದಿರಗಧವ ರೊಂಭತ್ತುಜನರೆಂದೂ । ೨೩ ॥ ಸಪ್ತಋಷಿಗಳಿಗೆ ಸಮ ನೆನಿಪ ವೈವಸ್ವತನು । ಸಪ್ತವಾಹನನ ಆವೇಶ ಬಲದಿ ॥ ಲುಪ್ತವಾಗಲು ಕಡಿಮೆಯೆನಿಪ ಪ್ರಾವಹಿತಾರ। ಕ್ಲೃಪ್ತ ಷಂದೆರೂಪಕೃಪಿಯೆಂದು ಕರ್ಸಿಸು ವಳೀಗಾ ॥ ೨೪॥ ಹರನಂಶಯುತ ಘಟೋತ್ಕಚ ದುರ್ಮುಖನು ನಿಋತಿ । ಕರಸುವನು ರಾಹು ಯುಗಭೀಷ್ಮಕ ನೃಪಾ ॥ ನೆರೆ ಮಿತ್ರನಾಮಕನ ರೂಪ ನಾಲ್ವರು ಅಗ್ನಿ । ಗೆರಡುಗುಣದಿಂದಧಮರೆನಿಸರೆಂದೆಂದೂ ॥ ॥ ೨೫ ॥ ಮಾರಾರಿಯುಕ್ತ ಭಗದತ್ತರ ಸುಕತ್ಥನಕು । ಟೀರಗೆರಡವತಾರ ವಿಘ್ನೇಶಗೆ ॥ ಚಾರುದೇಷ್ಣನು ವಂದೆ ಇಂದ್ರನಾವೇಶಯುತ । ಆರುರೂಪ ಗಳುಪ್ಪನಾಸತ್ಯದಸ್ರರಿಗೆ ॥ ೨೬ ॥ ವಿವಿಧ ವಿವಿದ ವ್ಯೆಂದ ತ್ರಿಶಿಖ ನಕುಲ ಸಹ । ದೇವ ವಿಭು ಅವತಾರ ಅಶ್ವಿನಿದೇವತೆಗಳಾ ॥ ಲವಣಾದಿ ಷಡ್ರಸ ಗಳೊಳಗಿದ್ದು । ಜೀವರಿಗೆ ಸಕಲ ಭೋಗಗಳಿತ್ತು ಸಂತೈಪರೆಂದು ॥ ೨೭ ॥ ದ್ರೋಣಾರ್ಕ ದೋಷಾಗ್ನಿ ಧ್ರುವ ವಿಭಾವಸುವುದ್ಯು । ಪ್ರಾಣಾಷ್ಟವಸುಗ ಳೊಳಗೆದ್ಯುನಾಮಾ॥ ವಾಣೀಶಯುಕ್ತ ಭೀಷ್ಮನು ನಂದಗೋಪಾಲ। ದ್ರೋ ಣನಾಮಕ ಪ್ರಥಾನಾಗ್ನಿಯಿಂದಧಮನೆಂದಾನವಿಪೆ॥ ೨೮ ॥ ಭೀಮರೈವತ ಜೈಕಪಾದಹಿರ್ಬುಧ್ನಿ ಭವ । ವಾಮ ಬಹುರೂಪೋಗ್ರೋಜ ವೃಷಾಕಪಿ॥ ಈಮಹಾನೆಂಬ ಹನ್ನೊಂದು ರುದ್ರರು ಭೂಮಿ । ನಾಮಕಜೈಕಪಾದಹಿ ರ್ಬುಧ್ನಿ ಭೂರಿಶ್ರವಗಾನವಿಪೆ॥ ೨೯ ॥ ತ್ರ್ಯಕ್ಷನುಳಿದ್ದತ್ತು ರುದ್ರರು ಸಮರು ಶಲಲ್ವ ವಿರೂ । ಪಾಕ್ಷನವತಾರ ಕೃಪವಿಷ್ಕಂಭನೂ ॥ ಲಕ್ಷಣಾ ಬಲಪತ್ರ

ತಾಪಕ ಸಹದೇವ । ರಕ್ಷಘ್ನ ಸೋಮದತ್ತನು ಎನಿಸುತಿಹನೆಂದೂ ॥
॥ ೩೦ ॥ ವಿರೂಪಾಕ್ಷ ವಿಷ್ಕಂಭಪತ್ರತಾಪಕ ಮರುತು । ಹರನರೂಪಾಂತ
ರಗಳಿವು ವಿವಸ್ವಾನ್ ॥ ಅರಿಯಮಾಪೂಷಭಗ ಸವಿತೃತ್ವಷ್ಟ್ರಧಾತ । ವರುಣ
ಶಕ್ರೋರುಕ್ರಮನು ಮಿತ್ರಪರ್ಜನ್ಯಗಾನಮಿಪೆ ॥ ೩೧ ॥ ಶೌರಿನಂದನನ
ಭಾನು ಸವಿತೃನಾಮಕ ಸೂರ್ಯ । ವೀರಸೇನನು ಯುಮಾವಿಷ್ಟುತ್ವಷ್ಟ್ರ ॥
ಅರುಜನರುತ್ತಮರೆನಿಪರು ಉರುಕ್ರಮುಶಕ್ರ । ವಾರಿಧಿ ವಿವಸ್ವಾನ್ ಮಿತ್ರ
ಪರ್ಜನ್ಯರಿಗೆ ॥ ೩೨ ॥ ಪ್ರಾಣನಾಗಾದಿ ಪಂಚಕ ಅಹಂಕಾರಿಕಾ । ಪ್ರಾಣ
ಪ್ರವಹ ವಿವಹ ಸಂವಹ ಸ್ವಾಚಿತಹಾ ॥ ಮಾನದಾಹವ ಪರಾವಹಕಾಲ
ಶ್ವಾಸ ಏ । ಕೋನ ಪಂಚಾಷಣ್ಮರುದ್ಗಣಸ್ಥರಿಗೆ ॥ ೩೩ ॥ ಅನಿಳ ನಳ
ಕುಮುದ ಮಂಡೂಕ ಸಂಜ್ಞಾ ಶ್ವೇ । ತನಂತತನು ಕೃಷ್ಣ ಖಚಿ ಶಂಭು
ರಕ್ತಸಿದ್ಧ ॥ ಹನು ಭೀಮಯುತಿ ಉದಿತ ಕಾಮುಮ ಜಡ ಪಿಂಗ ಕಂ ।
ಪನ ಉದ್ವಹಾ ಕೀಲಸೌಮ್ಯನೆಂಬ ಮಹಮಹಿಮರಿಗೆ ॥ ೩೪ ॥ ಶುಕ
ಶಂಕು ಗುರುಕಾಂತ ಪ್ರತಿಭ ಪ್ರವರ್ತಕನು । ಪಿಕಕಪಿಗಳಿವರು ಮರು
ತನು ಸಮಾರಾ ॥ ಯುಕ್ತ ಪಾಂಡು ಪರಾವಹನು ಎನಿಪ ಸಂಪಾತಿ ।
ಭ್ರುಕುಟಿಕೇಸರಿ ಶ್ವೇತ ಮರುತನವತಾರವೆಂದಾನಮಿಪೆ ॥ ೩೫ ॥ ಪ್ರತಿಭ
ಪಾತನು ಚೇಕಿತಾನನೆಂದೆನಿಪ ವಿ । ಪ್ರಥುಸೌಮ್ಯ ಕುಂತಿಭೋಜನೆ
ಕೂರ್ಮನೂ ॥ ಕ್ಷಿತಿಯೊಳಗೆ ಪ್ರಾಣಪಂಚಕರೊಳಗೆ ಪ್ರಾಣಗಜ । ವಿಧ
ಗವಾಕ್ಷಪಾನಾವ್ಯಾನಾಗವಯನು ಎಂದೂ ॥ ೩೬ ॥ ವೃಷನು ಶರ್ವ
ತ್ರಾತರು ರುಬಾನ ಗಂಧಮಾದ । ಸಮಾನರಿವರು ವಿತ್ತಪನ ಸುತರೂ ॥
ಶ್ವಸನಗಣದೊಳು ಕಿಂಚಿದುತ್ತಮರ ಹಂಪ್ರವಹ । ಗಸಮರೆನಿಪರು ಪ್ರಾಣ
ಪಂಚಕರು ಎಂದೆಂದೂ ॥ ೩೭ ॥ ಪ್ರತಿವಿಂಧ್ಯ ಧರ್ಮಜನು ಭೀಮಸೇನನ
ಪುತ್ರ । ಶ್ರುತಸೋಮ ಅರ್ಜುನಜ ಶ್ರುತಕೀರ್ತಿಪಾ ॥ ಶತ ಅನೀಕನ
ಕುಲಜ ಸಹದೇವನಾತ್ಮಜನು । ಶ್ರುತಕರ್ಮರಿವರು ದ್ರೌಪದಿದೇವಿಸುತ
ರೆಂದು ॥ ೩೮ ॥ ಚಿತ್ರರಥ ಅಭಿತಾಂಬ್ರಬಲಕಿಶೋರ ಗೋಪಾಲ । ರುತ್ತ
ಮರು ಗಂಧರ್ವರೈವರಿಂಬಾ ॥ ಯುಕ್ತರಾಗಿಹರು ಕೈಕೇಯರೈವರು
ಪಾಂಡು । ಪುತ್ರಜರು ವಿಶ್ವದೇವತೆಗಳಿವರೆಂದೂ ॥ ೩೯ ॥ ದ್ರವ ಆರ್ದ್ರ

ಕಾಲ ಕಾಮಧರ ದಕ್ಷ ಕೃತುಪುರೂ। ರವ ಸತ್ಯವಸುಧನು ಧುನಿಗಳಿ
ವರು ವಿಶ್ವೇ ॥ ದಿವಿಜರೀರೈದು ಋಭುಗಣ ಪಿತೃತ್ರಯದ್ಯಾವ । ಅವನಿ
ಪರು ಗಣಪಾದ್ಯರಧಮ ಮಿತ್ರರಿಗೆಂದು ॥ ೪೦ ॥ ವಸುಗಳೆಂಟಾದಿತ್ಯ
ಈರಾರು ಒಂದಧಿಕ। ದಶರುದ್ರಗಣ ಪಿತೃತ್ರಯ ಬೃಹಸ್ಪತಿ ॥ ದಶವಿಶ್ವ
ದೇವ ಅಶ್ವಿನಿಗಳೆರಡೈವತ್ತು । ಶ್ವಸನಗಣ ಋಭುವೊಂದೆರಡು ದ್ಯಾವಾ
ಪೃಥಿವಿಗಳಿಗಾನಮಿಪೆ ॥ ೪೧ ॥ ಒಂಭತ್ತು ಕೋಟಿ ದೇವತೆಗಳೊಳು ನೂರು
ಜನ। ರೆಂಬವರಿವರೆ ಸೋಮಪಾನಾರ್ಹರೂ ॥ ಅಂಬುಜಾಪ್ತರವಳ ಗುರು
ಕ್ರಮನುಳಿದು ಪದ್ಮ। ಸಂಭವನ ಸಹಿತರಾಗಿಹ ಶತಸ್ಥರಿಗೆ ॥ ೪೨ ॥
ಮರುತತ್ರಯರು ವಹ್ನಿಯರು ಸೋಮಶಿಖಿ ವಿವಾ । ಕರರಾರು ರುದ್ರ
ಗುರು ಇವರುಕ್ತರೂ ॥ ಉರುವರಿತ ಎಂಭತ್ತಯಿದು ಸಮರು ತನ್ನೊ
ಳಗೆ। ಸರಸಿಜೋದ್ಭವನ ಸುತರೆನಿಪ ಸನಕಾದಿಗಳಿಗಾ ॥ ೪೩ ॥ ಸನಕಾದಿ
ಗಳೊಳುತ್ತಮ ಸನತ್ಕುಮಾರ ಶಿಖಿ । ತನುಜ ಪಾವಕನು ಪರ್ಜನ್ಯ
ಸೂರ್ಯ ಎನಿಸುವನು ॥ ಶರಭವೊಂದೇ ರೂಪ ಧರ್ಮರಾಜನ ಪತ್ನಿದೇವ
ಕಿಯ ಶ್ಯಾಮಲಾರೂಪಳೆಂದಾನಮಿಪೆ ॥ ೪೪ ॥ ಯಮಭಾರ್ಯ ಶಾಮಲಾ
ರೋಹಿಣಿದೇವಿ ಚಂ। ದ್ರಮನಸ್ತ್ರಿ ಅನಿರುದ್ಧಗೇಹಿನಿ ಉಷಾ ॥ ದ್ಯುಮಣಿ
ಭಾರ್ಯಾಸಂಜ್ಞೆ ಗಂಗಾವರುಣ ಭಾರ್ಯೆ। ಸಮರಾರು ಜನಪಾವಕಗೆ ಕಿಂ
ಚಿದಧಮರೆಂದಾನಮಿಪೆ ॥ ೪೫ ॥ ಎರಡು ಗುಣ ಮಿತ್ರಗಿಂದಧಮ ಪರ್ಜನ್ಯ
ಯಿಾ। ರೆರಡು ವಹ್ನಿಗೆ ಕಡಿಮೆ ಪಾದಮಾನಿ ॥ ಸುರಪನಂದನ ಜಯಂತನು
ಪ್ರಹಲ್ಲಾದ ಈ। ರ್ವರು ಮುಖ್ಯರಧಮ ಪರ್ಜನ್ಯಗೆಂದೆಂದೂ ॥ ೪೬ ॥
ಎರಡು ಗುಣ ಪರ್ಜನ್ಯಗಿಂದಧಮಳು ಸ್ವಹಾ । ಎರಡಧಿಕ ಗುಣದಿ ಸ್ವಪ
ತಿಗೆ ನೀಚಳು ॥ ಅರಶಕ್ರಶಶಿ ಅಶ್ವಿಯುಕ್ತಾಭಿಮನ್ಯು ಚಂ। ದಿರಜ ಬುಧ
ನವತಾರ ಸ್ವಹದೇವಿಗಧಮನೆಂದಾನಮಿಪೆ ॥ ೪೭ ॥ ಎನಿಸುವಳು ಶಲ್ಯಳು
ಜರಾಸಂಧನಾತ್ಮಜಾ। ಶ್ವಿನಿಭಾರ್ಯನಾಮ ಭೀಮಾ ಅನಿಮಿಷ ॥ ಘನರಸಾ
ಧಿಪ ಬುಧಗೆ ಕಿಂಚಿದ್ಗುಣದಿ ಕಡಿಮೆ। ಅನಳ ಪತ್ನಿಗೆ ದಶಗುಣಾಧಮಳು
ಎಂದೆಂದು ॥ ೪೮ ॥ ಧರಣಿಗಭಿಮಾನಿ ಎನಿಸುವ ಸೂರ್ಯಸುತ ಶನ್ಯೈ।
ಶ್ಚರ ಉಷಾದೇವಿಗೆರಡು ಗುಣಾಧಮಾ ॥ ತರಣಿನಂದನಗೆ ಸತ್ಕರ್ಮಾಭಿ

ಮಾನಿಗಪು। ಷ್ಕರ ಕಡಿಮೆ ಪಂಚಗುಣದಿಂದ ಎಂದೆಂದೂ ॥ ೪೯ ॥ ನಾರದನ ಶಿಷ್ಯ ಪ್ರಹ್ಲಾದ ಬಾಲ್ಹಿಕನು ಸ। ಮೀರ ಸಂಯುಕ್ತಸಲ್ಹಾದಶಲ್ಯ। ಮೂರನೇನುಹ್ಲಾದ ಸವಿತೃನಾವೇಶದಲಿ । ತೋರಿದನು ವೃಷ ಧೃಷ್ಟಕೇತು ಎನಿಸಿ ಧರೆಯೊಳಗೆ ॥ ೫೦ ॥ ಕಾಮಾಂಶಯುಗ್ಜಯಂತನು ಬಭ್ರುವಹ ವರುಣ । ಭೌಮನು ಯಿರಾವನು ಚಿತ್ರಗುಪ್ತಾ ॥ ನಾಮಕಸಹೋತ್ರನು ಮಣಿಭದ್ರ ಆಖ್ಯ ಸು। ತ್ರಾಮನವತಾರನೆಂದರಿದು ನಿತ್ಯದಲಿ ॥ ೫೧ ॥ ಭಾವನೋಚಥ್ಯ ಋಷಿಗಳ ನೂರುಚಾಕ್ಷುಷನು । ದೈವತಸ್ವಾರೋಚಿಷೋತ್ತಮಮನೂ ॥ ಸಾವರಣಿ ಬ್ರಹ್ಮ ರುದ್ರಾಹ್ವಸಾವರಣಿತ್ರಯ । ದೇವೇಂದ್ರದಕ್ಷ ಧರ್ಮಾಖ್ಯ ಸಾವರಣಿಗಳಿಗಾನಮಿಪೆ ॥ ೫೨ ॥ ಮನುಗಳೇಕಾದಶರು ತದನಂತರದಿ ವಿರೋ। ಚನಪುತ್ರ ಬಲ್ಯಾದಿ ಭಾವೀಂದ್ರರೂ ॥ ಇನಿತು ನಾಮವ ಪೇಳ್ವೆ ಕರ್ಮದೇವತೆಗಳೆಂ । ದೆನಿಸುವರು ಲೋಕದೊಳು ಸರ್ವತ್ರ ಸರ್ವದಾ ॥ ೫೩ ॥ ಬಲಿರದ್ಭುತನು ದಿವಸ್ಪತಿಯು ಶುಚಿಸಪ್ತರು। ಕುಲಿಶಧರನು ದಿವಸ್ಪತಿಯು ಶುಚಿಸಪ್ತರು । ಕುಲಿಶಧರಪದಯೋಗ್ಯರನ್ಯ ಕರ್ಮಪ ನೃಪರು । ಜಲಜಾಕ್ಷ ವಿಷ್ಣುನಾವೇಶಯುತರೆಂದೂ ॥ ೫೪ ॥ ಕೃತವೀರ್ಯತನಯ ಶಶಿಬಿಂದು ಮಾಂಧಾತಗಯ । ಪೃಥುಕಕುಸ್ಥ ಪ್ರಿಯವ್ರತ ತ್ರಿಜನ್ಮ ॥ ಧೃತ ಭರತ ದೌಷ್ಯಂತ ಭರತಮುಖ ರಾಜನ್ಯ। ಶತ ಅಷ್ಟಗಂಧರ್ವ ಸಪ್ತಪಿತೃಗಳಿಗೆ ॥ ೫೫ ॥ ದ್ವಿನವತಿ ಅಪ್ಸರ ಸ್ತ್ರೀಯರು ಮೊದಲಾದ ಶತ। ಗುಣದಿಂದಧಮರು ಪರ್ಜನ್ಯಗಿಂದ॥ ಅನುಚಾರಿ ಆವೇಶ ಬರಲು ಪರ್ಜನ್ಯಾದಿ। ಅನಿಮಿಷರಿಗುತ್ತಮರು ದೇವತೆಗಳಿಂದಾನಮಿಪೆ॥ ೫೬ ॥ ಸುರಕುಲೋದ್ಭವ ಅನಾಖ್ಯಾತ ಆಜಾನೇಯ। ಮರರು ಎನಿಸುವರು ಉದ್ವಹ ನಾಮಕಾ ॥ ಮರುತನಾವೇಶಯುತಸಂಜಯುವಿರಾಧ ತುಂ। ಬುರನ ಅವತಾರವೆಂದಡಿಯ ನಿತ್ಯದಲಿ ॥ ೫೭ ॥ ಜನಮೇಜಯನು ತ್ವಷ್ಟ್ರ ನಾವೇಶ ಚಿತ್ರರಥ । ದನುನಾಮಗಂಧರ್ವದಮುಘೋಷ ॥ ಯೆನಿಸುವ ಕಬಂಧಾಹ್ವ ಅಬ್ಜಜ ಸ್ವಾಯಂ । ಭುವನುಯುಕ್ತ ಅಕ್ರೂರಕರಸುವ ಕಿಶೋರನೆಂದಾನಮಿಪೆ ॥ ೫೮ ॥ ಧೃತರಾಷ್ಟ್ರಗಂಧರ್ವ ವಾಯುನಾವೇಶದಿಂ । ಧೃತರಾಷ್ಟ್ರನೆನಿಸಿದನು ನಕ್ರ ದ್ರುಪದಾ ॥

ಕ್ಷಿತಿಪರೀರ್ವರು ಹೂಹೂ ಗಂಧರ್ವತಹ ಪುರುತ । ಯುತನಾಗಿ ಜನಿಸಿದನು ಹರಿಸೇವೆಗೆಂದೂ ॥ ೫೯ ॥ ವೃಂದಾರಕರೊಳು ಗಾಯಕರೆನಿಪ ಹಹವಿವಹ ಗಂಧವಹನಾವೇಶ ಯುಗ್ವಿರಾಟ ॥ ನಂದದಂಶಜಗರನೂ ವಿದ್ಯಾಧರಾಕಂಸ । ತಂದೆಯೆನಿಪುಗ್ರಸೇನನೆ ಉಗ್ರಸೇನನೆಂದಾನ ॥ ೬೦ ॥ ತಾಮರಸಭವ ಯುಕ್ತನಾದ ವಿಶ್ವಾವಸುಯುಧಾಮನ್ಯು ಉತ್ತಮೋಜನು ಅರ್ಯಮಾ॥ ವ್ಯೋಮಮಣಿಯುತ ಪರಾವಸು ಸತ್ಯಜಿನ್ಮಿತ್ರನಾಮಕಾರ್ಕ ಕಳಾವಿಷ್ಟ ಚಿತ್ರಸೇನನಿಗೆ ॥ ೬೧ ॥ ಬಲನೆಂಬೊ ಗಂಧರ್ವ ಮೊದಲಾದ ನೂರು ಗೋ । ಕುಲದೊಳಗೆ ಗೋಪಾಲರೆನಿಸುತಿಹರು ॥ ತಿಳಿವದೂರ್ವಶಿ ಮುಖ್ಯ ಅಪ್ಸರರೊಳಗೆ ಪಿಂಗಳನಾಮ ಅಪ್ಸರಳು ಸೈರಂಧ್ರಿಯೆನಿಪಳೆಂದಾನ ॥ ೬೨ ॥ ನಕುಲನಸ್ತ್ರೀ ಪಾರ್ವತಿ ತಿಲೋತ್ತಮಳು ಷ । ಣ್ಮುಖನಂದನ ಸ್ಯುಕ್ತಳಭಿಮನ್ಯು ತಾಯಿ ॥ ಸಖಿ ಸುಭದ್ರಾ ತ್ರಿಜಟನಾಮಕಳು ಪೂರ್ವದಲಿ । ಅಕಳಂಕ ಗೋಕುಲ ಸ್ತ್ರಿಯರಪ್ಸರರೆಂದು ॥ ೬೩ ॥ ನೂರುಳಿದು ಶತಕೋಟಿ ಋಷಿಗಳುತ್ತರಬಟ್ಟು । ಈರೆಂಟು ಸಾವಿರದ ನೂರೆನಿಸುವಾ ॥ ಶೌರಿ ಸ್ತ್ರೀಯರು ರಮಾವೇಶಯುತರಗ್ನಿಗೆ ಕು । ಮಾರಕರು ಪಾವಕಗೆ ಅಧಮರೆಂದೆಂದೂ ॥ ೬೪ ॥ ಇವರೊಳಧಿಕಕಶೇರು ತ್ವಷ್ಟ್ರನಾಮಕ ಸೂರ್ಯ । ಕುವರಿ ಆಜಾನಜರು ಕರ್ಮಜರಿಗೆ ॥ ಅವರೈವತ್ತು ಗುಣದಿಂದ ಆಜಾನ ದಿವಿ। ಜರಿಗೆ ಪಾವಕಸಮಾನರೆಂದರಿದೂ॥ ॥ ೬೫ ॥ ಕೃಷ್ಣಾಂಗಸಂಗ ಗೋಪಿಯರಿಂದ ವಿಭಕ್ತಿ । ದ್ವ್ಯಷ್ಟ ಸಹಸ್ರ ಶತ ಸ್ತ್ರೀಯರೊಳಧಿಕಾ॥ ವಿಷ್ಣುಪತ್ನ್ಯಾವೇಶ ಬರಲು ಆಜಾನುಜರು। ಶ್ರೇಷ್ಠರೆನಿಪರು ಹ್ರಾಸಕಾಲದಲಿ ಸಮರೆಂದೂ ॥ ೬೬ ॥ ನಂದಗೇಹಿನಿ ಅಗ್ನಿ ಪುತ್ರರಿಗೆ ಸಹಸ್ರ ಗುಣ। ದಿಂದುತ್ತಮಳು ಯಶೋದೆಗೆ ದೇವಕಿ ॥ ವಂದ್ಯಳೆನಿಸುವಳು ವಸುದೇವ ಉತ್ತಮ ಏಳು । ಮಂದಿಗಳನುಳಿದು ಚಿರಪಿತೃ ಶತಾಧಮರೆಂದು ॥ ೬೭ ॥ ಸ್ವಮುಖ ಪ್ರೇರಿತ ದೇವ ಗಂಧರ್ವ ಗಣ ಶತಾ । ಧಮ ಚಿರಪಿತೃಗಳಿಗೆ ನರಗಾಯಕ॥ ಸಮುದಾಯ ಮೂರು ಗುಣ ಮನುಜೋ । ತ್ತಮರು ಶತಾವರರೆಂದು ॥ ೬೮ ॥ ಪರಮ ಮುಖ್ಯ ಸುತಾತ್ಪಿಕರು ಯೆನಿಪರೀಶನ್ಯೈ। ಶ್ವರರವಿಡಿದು ಧರಣಿಪರಿಯಂತವಾಗಿ ॥ ಕರಸುವರು

ಮುಖ್ಯ ತಾತ್ವಿಕರೆಂದು ತಮ್ಮೊಳಗೆ । ಶರದ ಶತ ಸಹಸ್ರಾನಂತ ಗುಣದಿ ಕ್ರಮದಿ ॥ ೧೯ ॥ ದೇವತಾಸ್ತ್ರೀಯರು ತಮ್ಮಯಾ ಪತಿಗಳಿಗೆ ದಶಗು । ಣಾವರರೆನಿಸುವರು ಮುಕ್ತಿಯೊಳಾದರು ॥ ಈವಿಧದಿ ನೀಚೋಚ್ಚ ಕ್ರಮ ವರಿತು ಭಜಿಪರಿಗೆ । ಈವರಖಿಳಾರ್ಥಗಳ ಐಹಿಕ ಪಾರತ್ರದಲಿ ॥ ೨೦ ॥ ಭಕ್ತಿ ವಿಜ್ಞಾನ ಬಲದೇವತಾಗಣಕೆ ಅಭಿ । ವ್ಯಕ್ತಿ ತತ್ತದ್ಯೋಗ್ಯತಾನು ಸಾರ ॥ ಮುಕ್ತಿಪರಿಯಂತ ಭಗವದ್ರೂಪ ದರ್ಶನ ಪ್ರ । ಯುಕ್ತ ಮಾಳ್ಪುದು ಸಾಧನಗಳ ನಿಷ್ಕಾಮದಿಂದಾನಮಿಪೆ ॥ ೨೧ ॥ ಪ್ರತಿದಿವಸಗಳಲಿ ಸದ್ಭ ಕುತಿಪೂರ್ವಕ ತ್ರಿಸ । ಸ್ತುತಿ ಪದಾತ್ಮಕ ಬೃಹತ್ತಾಂತವ್ಯಾ ॥ ಜತವಾಗಿ ಕಂಠಮಧ್ಯದಲಿ ಧರಿಸುವರ ಶಾ । ಶ್ವತ ಕರುಣಿ ಸಂತೈಪ ಸರ್ವ ಕಾಲ ದಲಿ ॥ ೨೨ ॥ ಪುರುಷರೂಪನುಕ್ಷರಾಕ್ಷರ ಪುರುಷಪೂಜ್ಯ ಸಮ । ಚರಣ ಪಂಕಜ ಚಾರು ಚರಿತ ಸ್ವರತಾ । ಕರುಣಾಕರೇಶ ಕಾಮಿತ ಕಲ್ಪತರು ಜನ್ಮ । ವರ್ಜಿತ ಜಗನ್ನಾಥವಿಠಲರಾಯಗಾನಮಿಪೆ ೨೩ ॥ ಶ್ರೀಃ ॥

## ತಂತ್ರಸಾರ.

ಗಳ೫. ರಾಗ ನಾಟಿ, ಝಂಪೆತಾಳ.

ಪಾಹಿ ಪಂಕೇರುಹೇಕ್ಷಣ ಸರ್ವ ಕಾಮದ । ಪಾಹಿ ಪದ್ಮಾಲಯ ನಿಕೇತನ ಸದಾ ॥ ಪಲ್ಲ ॥ ಜಯತು ಚತುರಾನನ ಭವೇಂದ್ರಾದಿ ವಿಬುಧನುತ । ಜಯತು ಚತುರಾನನ ರಮಾಮನೋವಲ್ಲಭಾ ॥ ಜಯತು ಸಂಪೂರ್ಣಚಿತ್ಸುಖ ಮುಖ್ಯ ಸುಗುಣನಿಲಯ । ಜಯತು ಜನ್ಮಾದಿ ಕಾರಣ ದೋಷಹಾ ॥ ॥೧॥ ಕಮಲಾಕ್ಷ ಪರಮ ಸಂಭ್ರಮದಿಂದ ಲಕ್ಷ್ಮಿ ಕರ । ಕಮಲದಿಂ ಸೇವೆಗೊಳ್ಳುತಿರಲು ಆಗಾ ॥ ಅಮರ ನಿಕರಾರಾಧ್ಯ ಕಮಲಾಸನನು ಬಂದು । ನಮಿಸಿ ಬಿನ್ನೈಸಿದನು ತನ್ನ ಪಿತಗೇ ॥ ೨ ॥ ಆವ ಸರ್ವದೇವೋತ್ತಮನು । ಆವಾವ ಶಬ್ದವಾಚ್ಯವರಿಸಿ ॥ ಈವಿಚಾರವ ಪೇಳೆನಲು ನಸುನಗುತ ರಾ । ಜೀವಸಂಭವಗೆ ಇಂತೆಂದು ನುಡಿದಾ ॥ ೩ ॥ ವನಜಸಂಭವ ಕೇಳು ನಾನೆ ಸರ್ವೋತ್ತಮನು । ಎನಗನಂತಾನಂತ ಮಂಗಳ ಗುಣಾ ॥ ಪ್ರಣವ ವಾಚ್ಯನು ನಾನು ಅಷ್ಟವರ್ಣೋಪೇತ । ಪ್ರಣವ ವಿಚಾರವನು ಪೇಳ್ವೆ

ನಿನಗೇ ॥ ೪ ॥ ಸಾದರದಿ ಕೇಳಿನ್ನಾಕಾರ ಉಕಾರ ಮಕಾರ। ನಾದಬಿಂದು ಘೋಷ ಶಾಂತ್ಯತಿ ಶಾಂತವು ॥ ಆದಿತ್ಯವರ್ಣದಲಿ ವಿಶ್ವತೈಜಸ ಪ್ರಾಜ್ಞ। ಮೋದಮಯ ತುರ್ಯಾತ್ಮಾಂತರಾತ್ಮ ॥ ೫ ॥ ಪರಮಾತ್ಮ ಜ್ಞಾನಾತ್ಮನೆಂಬಷ್ಟ ರೂಪದಿಂ। ದಿರುತಿಹೆನು ಮೇಧಾದಿಯಲಿ ಸರ್ವದಾ ॥ ಪರಮ ಋಷಿಗಳು ಈಮಹಾಮಂತ್ರವನೆ ಜಪಿಸೆನ್ನ। ಪುರವನೈದುವರು ಸತ್ವರದಿಂದಲೀ ॥ ೬ ॥ ವಾರಿರುಹಸಂಭವನೆ ಕೇಳಕಾರದಲಿ ಹದಿ। ನಾರು ಅಚ್ಚುಗಳು ಜನಿಸಿದವು ಕ್ರಮದಿಂದ ॥ ಚಾರು ಅಜ ಆನಂದ ಇಂದ್ರೇಶ ಮೊದಲಾದ। ಈರೆಂಟು ಮೂರ್ತಿಗಳು ವಿಶ್ವಜನಿತಾ ॥ ೭ ॥ ಉಪನಾದ ಬಿಂದುಘೋಷಗಳಿಂದ ಕ-ಚ-ಟ-ತ-ಪ। ವಿಮಲ ವರ್ಗಂಗಳು ಜನಿಸಿದವು ॥ ಕಮಲ ಸಂಭವ ಕೇಳು ತೈಜಸ ಪ್ರಾಜ್ಞ ತುರ್ಯ। ಆತ್ಮ ಅಂತರಾತ್ಮ ಮೂರ್ತಿಗಳಿಂದಲೀ ॥ ೮ ॥ ಪಂಚವಿಂಶತಿರೂಪ ಅಭಿವ್ಯಕ್ತವಾದವು ವಿ। ರಿಂಚಿ ಕೇಳು ಶಾಂತದಿಂ ಯ-ರ-ಲ-ವ-ಗಳು ॥ ಸಂಚಿಂತ್ಯ ಅತಿಶಾಂತದಿ ಶ-ಷ-ಸ-ಹ-ಳೆಂಬ। ಪಂಚಾಕ್ಷರಗಳು ಜನಿಸಿದವು ಅಲ್ಲಿ ॥ ೯ ॥ ಪರಮಾತ್ಮ ಜ್ಞಾನಾತ್ಮ ರೂಪದಿಂದೊಂಭತ್ತು। ನಿರುಪಮ ಸುಮೂರ್ತಿಗಳು ಶೋಭಿಸಿದವು ॥ ಪರಮೇಷ್ಠಿ ನಾರಾಯಣಷ್ಟಾಕ್ಷರಮಂತ್ರ। ಒರವೆ ನಿನಗಾನು ಸಾಂಗೋಪಾಂಗದೀ ॥ ೧೦ ॥ ತಾರಕದ ಅಷ್ಟವರ್ಣಗಳಿಂದ ಓನ್ನಮೋ। ನಾರಾಯಣನೆಂಬೀ ಬೀಜಮಂತ್ರವು ॥ ಚಾರು ಅಷ್ಟವರ್ಣ ತದ್ವಾಚ್ಯ। ಮೂರುತಿಗಳೆಂಟು ಸಾವಿರ ವಿಶ್ವಾದಿ ಪ್ರಣವಸುಭಿನ್ನಾ ॥ ೧೧ ॥ ಓಂ ಭೂಃ ಓಂ ಭುವಃ ಓಂ ಸುವಃ ಓಂ। ಯೆಂಬ ಓಂ ಭೂರ್ಭುವಸ್ವಃ ಈವ್ಯಾಹೃತೀ ॥ ಅಂಬುಜೋದ್ಭವ ಪ್ರಣವಧದಿನಾಲ್ಕು ವರ್ಣದಿಂ। ಸಂಭವಿಸಿತೀಮಂತ್ರ ಸುಲಭದಿಂದಾ ॥ ೧೨ ॥ ತನಯ ಕೇಳೀಮಂತ್ರಗತ ನಾಲ್ಕು ರೂಪಗಳು। ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ॥ ಅನಘ ಶ್ರೀವಾಸುದೇವನ ಮೂರ್ತಿಗಳನು ಚಿಂ। ತನೆಮಾಡು ಈ ವ್ಯಾಹೃತಿಯಲ್ಲಿ ಬಿಡದೇ ॥ ೧೩ ॥ ನಿಗಮಾದಿ ಮೊದಲು ನಾಲ್ಕು ವರ್ಣದಿಂ ಓನ್ನಮೋ। ಭಗವತೇ ವಾಸುದೇವಾಯ ಯೆಂಬಾ ॥ ಯುಗಳ ಆರಕ್ಷರಾತ್ಮಕ ಮಂತ್ರ ಪ್ರತಿಪಾದ್ಯ। ಭಗವದ್ರೂಪಗಳ ಪೇಳ್ವೆನು ನಿನಗೆ ನಾನೂ ॥ ೧೪ ॥

ಕೇಶವ ನಾರಾಯಣ ಮಾಧವನು ಗೋವಿಂದ । ಕ್ಲೇಶನಾಶನ ವಿಷ್ಣು ಮಧುಸೂದನಾ ॥ ಶ್ರೀಶ ತ್ರಿವಿಕ್ರಮ ವಾಮನ ಶ್ರೀಧರ ಹೃಷೀ । ಕೇಶಾಂಬುರುಹನಾಭ ದಾಮೋದರಾ ॥ ೧೫ ॥ ತೃತೀಯ ಆವರ್ತಿ ೞಷ್ಟವರ್ಣದಿಂ ಮೂರು ವ್ಯಾ । ಹೃತಿಯಿಂದ ದ್ವಿಷಡಕ್ಷರೆರಡರಿಂದಾ ॥ ಚತುರಾಸ್ಯ ಕೇಳು ಗಾಯತ್ರಿ ಉತ್ಪನ್ನವಾ । ಯಿತು ಕೇಶವಾದಿ ಕೃಷ್ಣಾಂತರೂಪಾ ॥ ॥ ೧೬ ॥ ವಿತತ ಪಾದವು ಪುರುಷಸೂಕ್ತ ಗಾಯತ್ರಿಯಿಂ । ದತುಳ ಈ ಪುರುಷಸೂಕ್ತದಲಿ ವೇದಾ ॥ ತತಿಗಳುದಿಸಿದವು ನಿಗಮಾದಿ ಬ್ರಹ್ಮಸೂತ್ರಭಾ । ರತ ಪಂಚರಾತ್ರಾದಿ ಆಗಮಗಳು ॥ ೧೭ ॥ ಶತಕೋಟಿ ಮೂಲ ರಾಮಾಯಣ ಪುರಾಣಗಳು । ಸ್ಮೃತಿಸಮೂಹಗಳುಪಪುರಾಣಂಗಳು ॥ ಇತರ ವೈದಿಕ ಸುಶಬ್ದಗಳು ಜನಿಸಿದವು । ಸತತ ವಾಚ್ಯನು ನಾನು ಸಂದೇಹವಿಲ್ಲ ॥ ೧೮ ॥ ಉದಯಿಸುತ ರವಿಯವೋಲ್ಕಾಂತಿ ಜ್ಞಾನಾನಂದ । ಮೊದಲಾದ ದಿವ್ಯ ಗುಣಮಯ ಶರೀರಾ ॥ ಸುದರ್ಶನದರ ಗದಾಂಬುಜಗಳಾಯುಧವೆನಗೆ । ತ್ರಿದಶ ಗಣನೆಯಲಿ ಸರ್ವೇಶ ನಾನೂ ॥ ॥ ೧೯ ॥ ಈದೆಶೆಯಲೆನ್ನ ಸೇವಿಪರು ಶ್ರೀ । ಭೂದೇವಿ ಕ್ರುದ್ಧೋಲ್ಕ ಕೇಶವನು ಮತ್ಸ್ಯಾದಿ ಮದ್ರೂಪಗಣ । ಮಧ್ಯಗನು ನಾನು ಬ್ರಹ್ಮ ಫಣಿ । ಪಾದ್ಯರತಿಭಕ್ತಿಸೇವ್ಯನು ಸಮರ್ಥಾ ॥ ೨೦ ॥ ಅರಿದರಾವರಭಯವಾಂಛಿತ ಚತುರ್ಭುಜನು ನಾ । ಲ್ಕೆರಡು ರೂಪಗಳು ಪ್ರದೀಪ್ತವರ್ಣ ಸರ್ವಾ ॥ ಭರಣ ಭೂಷಿತನಾದ ಮದ್ರೂಪ । ನಿರುಪಮ ಮುಮುಕ್ಷುಗಳಿಂದಲಿ ॥ ॥ ೨೧ ॥ ತಾರ ನಾರಾಯಣಷ್ಟಾಕ್ಷರವು ವ್ಯಾಹೃತಿಯು ಈ । ರಾರು ವರ್ಣ ಗಾಯತ್ರಿಮಂತ್ರಾ ॥ ಸಾರವಾತ್ಮಕ ಪುರುಷಸೂಕ್ತಂಗಳಿವು । ನೀರಜಾಸನ ಕೇಳೊ ಮಹಾಮಂತ್ರವೂ ॥ ೨೨ ॥ ಸೀತಾರಮಣ ಮೂಲ ರಾಮನಂತೆ ಹರುಷದಿಂದಲಿ ವಿ । ಧಾತ್ರ ಉಪದೇಶ ಈತೆರದಲಿ ॥ ಪ್ರೀತಿಯಿಂದಲಿ ದ್ವಾದಶಾವರ್ತಿ ಪಠಿಸೆ ಶೇ । ಷಾತಪತ್ರನು ಕಾಮಿತಾರ್ಥವನೆ ಈವಾ ॥ ೨೩ ॥ ಬ್ಯಾಗವಟ್ಟದ ರಂಗ ಒಲಿದು ಶ್ರೀನರಸಿಂಹ । ಭಾಗವತರಣುಗ ಜಗನ್ನಾಥದಾಸಾ ॥ ಬಾಗಿ ವಿಜ್ಞಾಪಿಸಲು ಕೈಕೊಂಡುಪಮಾನು । ರಾಗದಲಿ ಪೇಳಿಸಿದವು ತಂತ್ರಸಾರಾ ॥ ೨೪ ॥ ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ ।

ವಿರಚಿಸಿದವೀಗ್ರಂಥ ಪದರೂಪದೀ ॥ ಅರಸಿಕರು ನಿಂದಿಸಲು ಕುಂದಾವ ದಿದಕೆ ಭಾ। ಸ್ಕರನುದಯ ಘೂಕ ನಿಂದಿಸಿದ ತೆರದೀ ॥ ೨೫ ॥ ಧರ್ಮಾರ್ಥ ಕಾಮ ಮೋಕ್ಷಗಳೀವ ಗ್ರಂಥವಿದು। ನಿರ್ಮಾಣಮಾಡಿಸಿದ ರಾಮ ಚಂದ್ರಾ ॥ ಭರ್ಮಗರ್ಭಗೆ ಒಲಿದು ಪೇಳಿದ ಮಹಾಮಂತ್ರ ಮರ್ಮ ಗಳನರಿತು ಜಪಿಸುವನೆ ಧನ್ಯಾ ॥ ೨೬ ॥ ವರದೇಂದ್ರಮುನಿ ರಚಿತ ಈ ತಂತ್ರಸಾರವನು । ಬರದೋದಿ ಕೇಳಿ ಮೋದಿಪ ಸುಜನರಾ ॥ ವರ ಮೂಲರಾಮ ವೇದವ್ಯಾಸರಿಹಪರದಿ । ಕರುಣಿಪರು ಬೇಡಿದಿಷ್ಟಾರ್ಥ ಗಳನೂ ॥ ೨೭ ॥ ಮಂಗಳ ರಮಾಪತಿಗೆ ಮಂಗಳ ದ್ರುಹಿಣಪಿತಗೆ । ಮಂಗಳಂ ದಶಪ್ರಮಿತಿ ಮುನಿಮಾನ್ಯಗೆ ॥ ಮಂಗಳಂ ಶಿವೇಂದ್ರಾದಿ ಸುರ ನಿಕರಪೂಜ್ಯಗೆ। ಮಂಗಳಂ ಜಗನ್ನಾಥವಿಠಲಯ್ಯಗೆ ॥ ೨೮ ॥ ಇಪ್ಪತ್ತ ವೊಂಭತ್ತು ಪದಗಳೆಂಬತಿವಿಮಲ। ಪುಷ್ಪಮಾಲಿಕೆ ಮೂಲರಾಮನಡಿಗೇ ॥ ಅರ್ಪಿಸಿದವೀಸುಮಾನದ ನಾಮಪನುದಿನದಿ । ಒಪ್ಪದಿಹರೆ ಬುಧರು ಮಸ್ತಕದಲೀ ॥ ೨೯ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೪೬. ರಾಗ ನಾಟ, ತ್ರಿಪುಟತಾಳ.

ರಾಘವೇಂದ್ರ ಯತಿಸಾರ್ವಭೌಮ ದುರಿ। ತೌಘದೂರ ತೇ ನಮೋ ನಮೋ ॥ ಮಾಗಧರಿಪು ಮತಸಾಗರ ವಿಧುನ ಅಘವಿನಾಶನ ನಮೋ ನಮೋ॥ ಶ್ಲಾಘಿತ ಗುಣಗಣ ಸೂರಿಪ್ರಸನ್ನ ಸ। ದಾಗಮಜ್ಞ ತೇ ನಮೋ ನಮೋ ॥ ಮೇಘಶ್ಯಾಮಲವರ್ಣನ ನಾಮಾ । ಮೋಘಬೋಧ ತೇ ನಮೋ ನಮೋ ॥ ೧ ॥ ತುಂಗಭದ್ರಸುತರಂಗಿಣಿ ತೀರಗ । ಮಂಗಳಚ ರಿತ ಶುಭಾಂಗ ನಮೋ ॥ ಗಾಂಗೇಯಾ ಸಮಭಂಗ ಕುಮುದಮಾ । ತಂಗ ಸಂಗಸಿತಪಾಂಗ ನಮೋ॥ ಇಂಗಿತಜ್ಞ ಕಾಳಿಂಗಮಥನ ಯದು। ಪುಂಗವ ಹೃದಯ ಸುಸಂಗ ನಮೋ ॥ ಸಂಗಿತಚಿಹ್ನಿತ ಶೃಂಗಾರಾನನ । ತಿಂಗಳ ಕರುಣಾಪಾಂಗ ನಮೋ ॥ ೨ ॥ ಕೋವಿದ ಮಸ್ತಕ ಶೋಭಿತ ಮಣಿ ಸಂ। ಭಾವಿತ ಮಹಿಮಾ ಪಾಲಯಮಾಂ॥ ಸೇವಾಪರುಸರ್ವಾರ್ಥ

ಪ್ರದ ವೃಂ। ದಾವನಮಂದಿರ ಪಾಲಯಮಾಂ ॥ ಭಾವಜಮಾರ್ಗಣ ಭುಜಗವಿನಾಯಕ। ಭಾವಜ್ಞಪ್ರಿಯ ಪಾಲಯಮಾಂ॥ ಕೇವಲ ನತಜನ ಪಾವನರೂಪ ಸ। ಬಾವಿನೋದ ಹೇ ಪಾಲಯಮಾಂ॥ ೩ ॥ ಶ್ರೀಸು ಧೀಂದ್ರ ಕರಜಾತ ನಮೋ ನಮೊ। ಭೂಸುರನುತ ವಿಖ್ಯಾತ ನಮೋ ॥ ದೈಶಿಕ ವರ ಸಂಸೇವ್ಯ ನಮೋ ನಮೊ । ದೋಷವಿವರ್ಜಿತ ಭವ್ಯ ನಮೋ ॥ ಕ್ಲೇಶಿತ ಜನ ಪರಿಪಾಲ ನಮೋ ನಮೊ। ಭಾಷಿತ ಕರುಣಾ ಶೀಲ ನಮೋ ॥ ವ್ಯಾಸರಾಮ ಪರಭಕ್ತ ನಮೋ ನಮೊ । ಶಾಶ್ವತ ಧರ್ಮಾಸಕ್ತ ನಮೋ ॥ ೪ ॥ ಸನ್ನುತ ಮಹಿಮಾ ಜಗನ್ನಾಥವಿಠ್ಠಲ। ಸನ್ನಿತ ಮಾನಿತ ಜಯಜಯ ಭೋ॥ ಚಿಹ್ನಿತ ದಂಡಕಮಂಡಲ ಪುಂಡ್ರ ಪ್ರ। ಸನ್ನ ಜಯಾಹಹ ಜಯಜಯ ಭೋ ॥ ಮಾನ್ಯ ಮಹಾತ್ಮ್ಯಪ್ರಸನ್ನ ವದನ ಕಾ। ರುಣ್ಯಪಯೋನಿಧಿ ಜಯ ಜಯ ಭೋ ॥ ಧನ್ಯಕ್ಷಮ ಸಂಪನ್ನ ಧರಾಮರ । ಶರಣೇಶಾರ್ಚಿತ ಜಯ ಜಯ ಭೋ ॥ ೫ ॥ ಶ್ರೀಃ ॥

## ೧೪೭. ರಾಗ ರೇಗುಪ್ತಿ, ಝಂಪೆತಾಳ.

ಶ್ರೀಮಧ್ವಚಿತ್ತಮಂದಿರನೆ ನಿನ್ನಯ ಚರಣ । ತಾಮರಸ ನೆರೆನಂಬಿದೇ ॥ ಪಲ್ಲ ॥ ಕಾಮಕ್ರೋಧವ ಕಳದು ನಿನ್ನ ನಾಮಾಮೃತವ । ಪ್ರೇಮದಲಿ ಎನಗುಣಿಸೋ ಸ್ವಾಮಿ ॥ ಅನುಪಲ್ಲ ॥ ಉಪರಾಗ ದಶಮಿ ದ್ವಾದಶಿದಿವಸ ಮೊದಲಾದ। ಉಪೇಕ್ಷೆಮಾಡಿ ಕಳದೇ ॥ ಉಪಕಾರಯೆಂದು ನಿಜ ಉಕ್ತಿಪೇಳಿದರೆನಗೆ । ಅಪಕಾರಕಾಣುತಿದಕೋ ॥ ನಿಪುಣನೆನಿಸುವನೆಂದು ಅಜ್ಞಾನಿಗಳಮುಂದೆ। ತಪವೃದ್ಧರನ್ನ ಹಳಿವೆ ॥ ಸ್ವಪನದೊಳಗಾದರೂ ವೈರಾಗ್ಯ ಬಯಸದಲೆ । ಕಪಟಮನುಜರೊಳಾಡಿ ನಿನ್ನ ಮರದೆ ಸ್ವಾಮಿ ॥ ೧ ॥ ಮಾರನ ಉಪಟಳಾಕಾರದಲಿ ನಾ ಬಲು। ಪೋರಬುದ್ಧಿಯನು ಮಾಡೀ॥ ಆರು ಇಲ್ಲದವೇಳೆ ಕಣ್ಣಾಸನ್ನೆಯೊಳವಳು। ಕೋರಿದ್ದು ಇತ್ತು ನೀಡೀ ॥ ಭಾರಿಭಾರಿಗೆ ಅವಳ ವಾರೆ ನೋಟಕೆ ಬೆರದು । ಕ್ರೂರಮಾನವರೊಳಗೆ ಆಡೀ ॥ ವಾರಿಜಾನಾಭ ನಿನ್ನ ಆರಾಧನೆಯ ಮರದು। ಧಾರುಣಿಭಾರಾದೆ। ಪರಲೋಕ ಮರದೇ॥

॥ ೨ ॥ ಭೂಸುರರು ಚಂಡಾಲಜಾತಿಯೆನ್ನವೆ ಬಲು । ಹೇಸಿಕಿಲ್ಲದೆ ತಿರುಗುವೆ ॥ ಆಸತಿಸುತರ ಸಾಕುವೆನೆಂದು ಪರಿಪರಿ । ವೇಷವನು ಧರಿಸಿ ಮೆರವೇ ॥ ಆಸೆವುಳ್ಳ ಮಹಪಿಶಾಚಿಗೊಳಗಾಗಿ ಹರಿ । ದಾಸನೆನಿಸಿದೆ ಅಪಹಾಸವಮಾನವನಾದೆ ॥ ೩ ॥ ಹಿರಿಯರಬಳಿ ಅರೆಘಳಿಗೆ ಕೂತರೆ । ಶಿರವ್ಯಾಧಿಯೆಂದೇಳುವೇ ॥ ದುರುಳ ದುರ್ವಾರ್ತೆಗಳು ಪೇಳಲು ಹಪುತೃಷೆ । ಮರದು ಲಾಲಿಸಿ ಕೇಳುವೇ ॥ ತರುಣಿ ಮಕ್ಕಳು ಯೆನ್ನ ಪರಿಪರಿ ಬೈದರೆ । ಪರಮಹರುಷವ ತಾಳುವೆ ॥ ಗುರುಹಿರಿಯರೊಂದುತ್ತರವನಾಡಲು ಕೇಳಿ । ಧರಿಸಲಾರದೆ ನಾನು ಮತ್ಸರಿಪೆ ಅವರೊಡನೇ ॥ ೪ ॥ ನಾವಮಾಡಿವಪರಾಧ ಯೆಣಿಸಿ ಬರದರೆ ಈ । ಭೂಮಂಡಲವು ಸಾಲದು ॥ ಕ್ಷಮೆಯೊಳಗುಳ್ಳ ದುರ್ಮತಿಯೆಲ್ಲ ಕೂಡಿ ಬಲು । ಈಮತಿಯು ಆದು ಪೋಲದು ॥ ಸಾಮಜವರದ ಜಗನ್ನಾಥವಿಠಲ ನಿನ್ನ । ನಾಮ ಒಂದ್ಹಲ್ಲದೆ ಪ್ರಾಯಶ್ಚಿತ್ತವು ಕಾಣೆ ॥ ೫ ॥ ಶ್ರೀಃ ॥

## ೧೪೮. ರಾಗ ಶಂಕರಾಭರಣ, ಆದಿತಾಳ.

ಬಂದೆ ಗುರುರಾಯ । ನಿನ್ನ । ಸಂದರ್ಶನವ ಬಯಸಿ ॥ ಪಲ್ಲ ॥ ನೊಂದು ಸಂಸಾರದಲ್ಲಿ । ಬೆಂದು ಬೇಡುತನಾ ॥ ಅನುಪಲ್ಲ ॥ ರಾಮದೂತನಾಗಿ ತ್ರಿಜಗದೊಳಗೆ ಮೆರದಾ ವೀರಾ । ಕಾಮಿನಿಮಣಿಗೆ ನೇಮದಿಂದುಂಗುರವನಿತ್ತೆ ॥ ೧ ॥ ಇನಕುಲದಿ ಜನಿಸಿ । ಗುಣಸಾಂದ್ರನಾಗಿ ಭಂಡಿಅನ್ನವನುಂಡು ದುರುಳರ ಚೆಂಡಾಡಿದ್ದು ಕೇಳಿ ॥ ೨ ॥ ಕಟ್ಟಕಡೆಯಲ್ಲಿ ಯತಿಯಾಗಿ । ಕೆಟ್ಟಮತಗಳ ತರಿದು । ಪುಟ್ಟ ಜಗನ್ನಾಥವಿಠಲನ ದಾಸರ ಪೊರೆವೊದು ಕೇಳಿ ॥ ೩ ॥ ಶ್ರೀಃ ॥

## ೧೪೯. ರಾಗ ಸಾವೇರಿ, ಆದಿತಾಳ.

ಗಿರಿರಾಜಾ । ಗಿರಿರಾಜಾ ॥ ಪಲ್ಲ ॥ ವರಶತರುಚಿರತೇಜವೇಂಕಟ ॥ ಅನುಪಲ್ಲ ॥ ಆರನ ಕಾಣದೆ ಸಾರಿದೆ ತ್ರಿಜಗವಿ । ಹಾರ ಪಿಡಿ ಕರಸವಿಾರಅಶನವರ ॥ ॥ ೧ ॥ ಶ್ರೀಕಮಲಭವಪಿನಾಕಿಮುಖಸುರ । ನಿಕರವನ್ನಾಳ್ವಲೋಕೈಕ

ಶರಣ್ಯಾ ॥ ೨ ॥ ನಂಬಿದ ಭಕ್ತಕುಟುಂಬಿಯುಂಬು । ಜಾಂಬಕ ವಾಲ್ಮಿಕ ಕೃಪಾಂಬುಧಿ ಕರುಣಿಸೋ ॥ ೩ ॥ ಮನವಾಕ್ಕಾಯದಿ ಮನಸಿಜ ಪಿತ ನಿನ್ನ । ಧೇನಿಸುವಂತೆ ಅನುದಿನಮಾಡು ॥ ೪ ॥ ಸಟಿಯಲ್ಲವೋ ನುಡಿ ದಿಟವೆಂಬದುಬುಧ । ಕಟಕ ಜಗನ್ನಾಥವಿಠಲವಿಹಂಗಪಾ ॥ ೫ ॥

## ಶ್ರೀಪಾಂಡುರಂಗಪಾರಿಜಾತ.

೧೫೦. ರಾಗ ಘರಜು, ಝಾಪುತಾಳ.

ಪಾಲಿಸೋ ಪಂಢರಿಪುರಿರೇಯಾ ಪಾವನ ಕಾಯಾ । ಭೀಮರಥಿ ಕುಲನಿಲಯಾ ॥ ಪಲ್ಲ ॥

**ಶ್ಲೋಕ** ॥ ತರುಣತುಳಸಿ ಮಾಲಾ ತಪ್ತಗಾಂಗೇಯಚೇಲಾ । ಶರಧಿತನಯಲೋಲಾ ಶಕ್ವರೀಕಾರಿಫಾಲಾ ॥ ಶಿರಿಅಜಭವಮೂಲಾ ಶುದ್ಧ ಕಾರುಣ್ಯಲೀಲಾ । ಪುರಹರಸುಖಲೀಲಾ ಪಾಹಿಗೋಪಾಲ ಬಾಲಾ ॥ ೧ ॥

**ಪದ** ॥ ನವಜಲಾಧರ ನಿಭಶ್ಯಾಮಲಾ । ವಪ್ಪಿ ಕೋಮಲಾ ವೈಜಯಂತೀಯ ಮಾಲಾ ॥ ರವಿಯಂತೆ ಪೊಳೆವಕುಂಡಲಹಾರಾ ಧೃತಕೇಯೂರ ಕೌಸ್ತುಭಮಣಿರುಚಿರಾ। ದಿವಿಭೂಪಾತಾಳಲೋಕದಿ ವ್ಯಾಪ್ತಾ । ದೋಷನಿರ್ಲಿಪ್ತಾ । ವಿಪತ್‍ಸ್ಥಿತಜನರಾಪ್ತಾ । ಭವವನಧಿಗೆ ಕುಂಭಸಂಭವಾ ॥ ದೇವರದೇವ । ಧರುವಮಾದ್ಯರ ಭಾವಾ ॥ ೧ ॥

**ಶ್ಲೋಕ** ॥ ಅಮಿತಸುಗುಣಧಾಮಾ ಆತ್ಮಭೂಪೂರ್ಣಕಾಮಾ । ಅಮರಕುಲಲಲಾಮಾ ಅಬ್ಜಧಾಮಾಭಿರಾಮಾ ॥ ಯಮಿಕುಲೋದಧಿ ಸೋಮಾ ಯಜ್ಞಭೃದ್ಯಜ್ಞನಾಮಾ। ಸಮರವಲಯಭೀಮಾ ಸಾತ್ವತಾಂ ಸಾರ್ವಭೌಮಾ ॥ ೨ ॥

**ಪದ** ॥ ದಿತಿಜಮರ್ದನ ದೀನರಕ್ಷಕಾ ಕರ್ಮಸಾಕ್ಷಿಕಾ । ಸಂರಕ್ಷಿತ ಸರ್ವಲೋಕಾ ವಿತತಮಹಿಮ ವಿಶ್ವನಾಟಕಾ । ವಕ್ರಘೋಟಕಾ ಶೋಭಿತರತ್ನಕಟಕಾ ॥ ನತಿಸುವೆ ನಳಿನಜಾಂಡೋದರಾ ಸರ್ವಾಧಾರಾ। ಸಂತತ ನಿರ್ವಿಕಾರಾ । ಮತಿಮಂದನಾಗಿ ನಿನ್ನನು ಬಿಟ್ಟೆ । ಮಮತೆಯ ತೊಟ್ಟೆ। ಕಾಣೆನೊ ಪುಣ್ಯ ಬಟ್ಟೆ । ೨ ॥

ಶ್ಲೋಕ ॥ ವನರುಹಭವ ತಾತಾ ವೀತತನ್ಮಾತ್ರ ಭೂತಾ। ದ್ಯುನದಿ ಜಲವಿಧೌತಾ ದಿವ್ಯಪಾದಾಂಬುಜಾತಾ ॥ ಅನಿಲತನಯಪ್ರೀತಾ ಅತ್ರಿಸದ್ವಂಶಜಾತಾ। ಅನಿಮಿಷಜಯಸೂತಾ ಅನತೇಷ್ಟಪ್ರದಾತಾ॥ ೩ ॥

ಪದ ॥ ಕರದಂಡಧರ ಕಟಿಸ್ಥಿತಪಾಣಿ। ಮಂಗಳಶ್ರೇಣಿ। ಲೋಕೈಕಸತ್ರಾಣಿ। ಶರಣು ಹೊಕ್ಕರ ಕಾಯುವ। ಬಿರುದಾಂಕಾ ಕಾಳಿಂಗನ ಬಿಂಕಾ॥ ಬಿಡಿಸಿದ್ಯೊ ನಿಷ್ಕಳಂಕಾ। ಮುರಶಿಶುಪಾಲ ಧೇನುಕಹಂಸಾ। ವತ್ಸಾಸುರಕಂಸಾ। ದಂತವಕ್ತ್ರಾದ್ಯರಹಿಂಸಾ। ಪರನಾಗಿ ಕೊಟ್ಟಿ ಧಾರುಣಿಗಿಷ್ಟಾ। ಸುಜನರ ಕಷ್ಟಾ। ಬಿಡಿಸಿದಿಯೊ ಓಜಿಷ್ಠಾ ॥ ೩ ॥

ಶ್ಲೋಕ ॥ ಜನನಮರಣದೂರಾ ಜಂಗಮಾಚರ ವಿಹಾರಾ। ದನುಜವನಕುಠಾರಾ ದೀನಮಂದಾರ ಧೀರಾ ॥ ಪ್ರಣತಭಯವಿಹಾರಾ। ಪ್ರಾಕೃತಾತೀತಸಾರಾ।ದಿನಪ ನಿಭ ಶರೀರಾ ದುಃಖವಾರಿದಸಮೀರಾಃ ೪ ॥

ಪದ ॥ ವನಧಿಬಂಧನ ವನೌಕಸನಾಥಾ। ಜಿತಾಸುರಯೂಥಾ। ನಿರ್ಮಲಶ್ರುತಿಗಾಥಾ। ಅನುದಿನದಲಿ ನಂಬಿದೆ ನಿನ್ನ। ಪಾಲಿಸುಯೆನ್ನಾ। ಸಂತತ ಸುಪ್ರಸನ್ನಾ। ಮನೊವಾಕ್ಕಾಯದಿ ಮಾಡಿದ ಕ್ರಿಯ। ನಿನ್ನದುಜೀಯ್ಯ। ಕರುಣದಿ ಪಿಡಿಕೈಯ್ಯಾ। ನೆನೆಯೆ ನೀನಲ್ಲದೆ ಅನ್ಯರ। ದುರ್ಜನದೂರಾ। ನಂದಗೋಪಕುಮಾರಾ ॥ ೪ ॥

ಶ್ಲೋಕ ॥ ಶುಭತಮಸುಖತೀರ್ಥಾರಾಧ್ಯಸದ್ಧ್ಯಾನಪಾತ್ರಾ। ಇಭವರರಿಪುಹರ್ತಾ ವಿಶ್ವಜನ್ಮಾದಿಕರ್ತಾ ॥ ಅಭಯದ ತವ ಪದಾಂಭೋಜಾತಯುಗ್ಮಪ್ರಸಾದಾ। ನಭದನುಪಿತ ದೇಹಿ ನಿಶ್ಚಲಾನಂತ ಪಾಹಿ ॥ ೫ ॥

ಪದ ॥ ವಸುಪತಿಸುತ ನಳಕೂಬರಾ। ಮಣಿಗ್ರೀವರಾ ತರುಜನ್ಮವಿದೂರಾ। ವೃಷಭ ಶಕಟಬಕ ಭಂಜನಾ। ಜನರಂಜನಾ। ನಿರ್ಗುಣ ನಿರಂಜನ। ವಸುದೇವನಿಗೆ ಮಗನಾಗಿದ್ದೆ। ಬೆಣ್ಣೆಯ ಕದ್ದೆ। ಗೋಪರೊಡಗೂಡಿ ಮೆದ್ದೆ। ಬಿಸಜಜಾಂಡವ ವದನದೊಳಂದೂ। ಸಜ್ಜನ ಬಂಧೂ। ತೋರಿದೆ ದಯ ಸಿಂಧೂ ॥ ೫ ॥

ಶ್ಲೋಕ ॥ ನಗಧರ ನಳಿನಾಕ್ಷಾ ತಾಕಿದನಯನವಕ್ಷಾ। ನೃಗನಗಪತಿಶಾಪಾನಿರ್ಹಣಾಕಾರ ಶ್ರೀಪಾ ॥ ಭೃಗುಮುಖ ಮುನಿಗೇಯಾ

ಭೂತನಾಥಾಸಹಾಯಾ । ಅಗಣಿತಸುಮಹಾತ್ಮಾ ಸರ್ವಜೀವಾಂತರಾತ್ಮಾ ॥ ೬ ॥

**ಪದ** ॥ ರಜನೀಶ ಬಿಂಬವನಿಳುಹಿದಾ । ಮಾವ ಕಳುಹಿದಾ । ಅಹಿತರನಳುಹಿದಾ । ದ್ವಿಜನಸಾಹನಂತಾಸನಪುರಾ । ವೈದೆ ಸತ್ವರಾ । ಶೋರಿದೆ ಸತ್ಪುತ್ರರಾ । ಭುಜಗಮಾರ್ಗಣರವಿನಂದನಾ । ಬಿಡೆಸ್ಯಂದನಾ । ವತ್ತಿಕುಂತಿನಂದನಾ । ನಿಜಭಾಪುರೆ ಕಾಯ್ದು ರಣದೊಳು । ಬಾಣನ ತೋಳು । ಖಂಡಿಸಿದ್ಯೊ ಕೃಪಾಳು ॥ ೬ ॥

**ಶ್ಲೋಕ** ॥ ಶಫರಕಮಠಕೋಲಾ ಶತ್ರು ಕಾಶ್ಯಪಿ ಸುಬಾಲಾ । ಮುಕುಳ ಅನಿಳವೇಲಾ ನೀಲಕಂಠಾಸ್ತ್ರಕಾಲಾ ॥ ದ್ರುಪದತನಯಚೇಲಾ ದೂರ ವರ್ಜಿತದುಕೂಲಾ । ರಿಪುದಿತಿಸುರಬಾಲಾ ರಕ್ತೆಪದಭೇದಸಾಲ ॥ ೭ ॥

**ಪದ** ॥ ಕ್ಷೇತ್ರಜ್ಞಾಕ್ಷೇತ್ರಸಾಮುಕಕ್ಷೀರಾ । ಅಬ್ಧಿನಿಜಾಗಾರಾ । ನಿರ್ಮಲಪೋಂಕಾರಾ । ಮಾತೃಪ್ರತಿಪಾದ್ಯಸ್ವರೂಪಾ । ವರ್ಜಿತ ಪಾಪ । ಗುರುವೆನಿಪಸಾಂದೀಪಾ । ಪುತ್ರನ ತಂದ ಪರಾಕ್ರಮಿ । ಯೆಲ್ಲರ ಸ್ವಾಮಿ । ಪರಮಪ್ರೀಯಜಾಮಿ । ಭಕ್ತಗೊಲಿದ ವಿಶ್ವರೂಪವಾ । ತೋರಿ ಚಾಪವಾ । ಕೊಟ್ಟು ಕಳಿದ್ಯೊ ತಾಪವಾ ॥ ೭ ॥

**ಶ್ಲೋಕ** ॥ ಅತಿವಿಮಲಸುಗಾತ್ರಾ ಅಖಿಳಲೋಕೈಕಪಾತ್ರಾ । ವೃತತಿಜದಳನೇತ್ರಾ ವೃತ್ರಹಾದ್ಯಮರಮಿತ್ರಾ ॥ ಶೃತಿಕಮಲಜಸೂತ್ರಾ ಸ್ತುತ್ಯಪಾವನಪವಿತ್ರಾ । ಪ್ರತಿಹಯಸುಚರಿತ್ರಾ । ಪಾತು ಲಕ್ಷ್ಮೀಕಳತ್ರಾ ॥ ೮ ॥

**ಪದ** ॥ ಏಳುಘೂಳಿಯಗೆದ್ದ ಯದುಪತಿ । ಸುಪರಂಜ್ಯೋತಿ । ನಿನ್ನಯ ದಿವ್ಯಖ್ಯಾತಿ । ಯಾರೇಳುಜಗದೊಳು ನುತಿಸೋರು । ನಿತ್ಯಸುಖಿಸೋರು । ಆನಂದಾಬ್ಧಿಗ್ಗತರೊ । ಕೇಳು ಮಾನವ ನಾ । ಬಲ್ಲೆನೆ ನಿನ್ನ । ನಿರುತಾಪನ್ನ । ಜನಕ್ಲೇಶ ಭಂಜನಾ ॥ ತಾಳಿದೆ ನರರೊಳು ನರವೇಷಾ । ಮಂಜುಳಭಾಷಾ । ಯೆನ್ನಯ ಅಭಿಲಾಷಾ ॥ ೮ ॥

**ಶ್ಲೋಕ** ॥ ಹನುಮನತ ಪಾದಾಬ್ಜಾ ಹಂಸಸಂವಕ್ತ್ರಕುಬ್ಜಾ । ತನುವಿಕೃತಪಿನಾಶಾ ಕಾಳಿಜಿಹ್ವಾಪಶುದೇಶಾ । ದನುಜದಿವಿಕರಾಳ್ವಮತ್ತ

ಪೌಂಡ್ರೇಶ್ವರಂತಳ್ವ । ಹನುಮವಿದುರವಂದ್ಯಾ । ಹೈಮಗರ್ಭಾಂತ ವಂದ್ಯಾ ॥ ೯ ॥

ಪದ ॥ ಇಟ್ಟಿಗೆಪೀಠ ಸಂಸ್ಥಿತಪಾದಾ । ಮಂಗಳಪ್ರದಾ । ಶಾಶ್ವತ ಮೋದಸುಪದ । ಕೊಟ್ಟು ಪಾಲಿಸೊ ಅನಿಮಿಷತರು । ನಿನ್ನಯ ಚಾರು । ಮೂರುತಿಯನ್ನ ತೋರು । ಪುಟ್ಟಲಾರೆನೊ ಜಗದೊಳು ದಾತಾ । ಎನ್ನಯ ಮಾತ । ಲಾಲಿಸು ಜಗನ್ನಾಥವಿಠಲವೃಂದಾರಕರ ಅರಸ । ಸಂತತಲೇಸ । ನಿನ್ನವರಿಗೆ ಶ್ರೀಶಾ ॥ ೯ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೧. ರಾಗ ಸೌರಾಷ್ಟ್ರ. ಆದಿತಾಳ.

ಶೋಭಾನವೆನ್ನಿರೆ ಸರ್ವಜ್ಞ ಹರಿಗೆ । ಶೋಭಾನವೆನ್ನಿ ಸವಿಚಾರನ ಪಿತಗೆ । ಶೋಭಾನವೆನ್ನಿ ಸರೋಜವದನೆಯ ಶೋಭನಕಾಯಕೆ ಶೋಭನದಾತನಿಗೆ ॥ ಶೋಭಾನೆ ॥ ಪಲ್ಲ ॥ ಶ್ರುತಿವೇದದವಗೆ ಕಪಟಕಮಠಗೆ । ತಪಸಿಯಂಬಕನ ಅಪಹರಿಸಿದಗೆ ॥ ಕೃಪಣಪ್ರಹ್ಲಾದನ್ನ ವಿಪದ ಕಳದಗೆ । ಶಿಪಿಯ ಕರದಿ ಬಲಿವಪುವ ಬಿಗಿಸಿದಗೆ ॥ ಚಪಲಾಕ್ಷಿಯರಾರತಿಯ ಬೆಳಗೀರೆ ॥ ಶೋಭಾನೆ ॥ ೧ ॥ ಕೊಡಲಿ ಕೋದಂಡವ ಪಿಡಿದ ಪಂಡಿತಗೆ । ಕಡಲ ಕಟ್ಟಿಸಿ ಖಳರೊಡಲ ಬಗಿದಗೆ ॥ ಮಡುವಿನೊಳಗೆ ಫಣಿಪೆಡೆಯ ತುಳಿದಗೆ । ಮೃಡನ ಗೆಲಿಸಿ ಕೀರ್ತಿ ಪಡೆದಂದಿತ್ತಗೆ ॥ ಮಡದೇರಾರತಿಯ ಬೆಳಗೀರೆ ॥ ಶೋಭಾನೆ ॥ ೨ ॥ ಸಿರಿಗೆ ಸುರಗೆ ಪಿಡಿದರವಿಂದಾಂಬಕಗೆ । ಶರಧಿಯೊಳಾಡ್ದಗೆ ಗಿರಿಮಹಿಧರಿಗೆ ॥ ನರಹರಿರೂಪಗೆ ಧರಣಿಯಾಳಿದಗೆ । ಧುರದೊಳು ರಾಯರ ತರಿದ ಸಮರ್ಥಗೆ ॥ ಹರಧೇರಾರತಿಯ ಬೆಳಗೀರೆ ॥ ಶೋಭಾನೇ ॥ ೩ ॥ ದಶರಥತನಯಗೆ ವಸುದೇವಸುತಗೆ । ವಸನ ವಿಹೀನಗೆ ಅಸುರಭಂಜನಗೆ ॥ ಝಷಕೂರ್ಮರೂಪಗೆ ವಸುಧೆವಾಹಕಗೆ । ಮಿಸುಣಿ ಕಶ್ಯಪುವಿನ್ನೊಬ್ಬಸುರ ಬಗಿದಗೆ ॥ ಶಶಿಮುಖಿಯರಾರತಿಯ ಬೆಳಗೀರೆ ॥ ಶೋಭಾನೇ ॥ ೪ ॥ ವಟು ಭೃಗುರಾಮಗೆ ಜಟಿಲಮಸ್ತಕಗೆ । ಕಠಿಣಕಂಸನ ತಾಳ್ಮೆಪಟವ ಮಾಡಿದಗೆ ॥

ನಿಟಿಲಾಕ್ಷವರದಗೆ ಕಟಕಭೀಕರಗೆ । ವಟಪತ್ರಶಯನ ನಿಷ್ಕುಟಿಲ ಜಗನ್ನಾಥ । ವಿಠಲಗಾರತಿಯ ಬೆಳಗೀರೆ ॥ ಶೋಭಾನೇ ॥ ೫ ॥ ಶ್ರೀಃ ॥

ಗ೫೨. ರಾಗ ಭೈರವಿ, ಅಟತಾಳ.

ಜಯಮಂಗಳಂ ನಿತ್ಯಶುಭಮಂಗಳಂ ॥ ಪಲ್ಲ ॥ ಮಂಗಳಂ ಗುರುರಾಘವೇಂದ್ರರಾಯಗೆ । ಮಂಗಳಂ ಸುಜನಾಂಬುಧಿಚಂದ್ರಗೆ ॥ ಅನುಪಲ್ಲ॥ ಶ್ರೀಸುಧೀಂದ್ರಕುಮಾರಗೆ ಮಂಗಳಂ ॥ ಭೂಸುರಾನ್ವಿತ ನಿಲಯಗೆ ಮಂಗಳಂ ॥ ದೈಶಿಕಕುಲವನಜಾರ್ಕಗೆ ಮಂಗಳಂ । ಭಾಸುರ ಕೀರ್ತಿಯ ಪಡದವಗೆ । ಜಯ ॥ ೧ ॥ ವೃಂದಾವನದೊಳಗೆ ಸುರದ್ರುಮ । ದಂದದಿ ರಾಜಿಸುವಗೆ ಮಂಗಳಂ ॥ ಅಂಧಪಂಗುಮೂಕ ಬಧಿರರೀಪ್ಸಿತ । ಸಂದೋಹ ಸಲಿಸುವ ಮುನಿವರ್ಯಗೆ । ಜಯ ॥ ೨ ॥ ಭೂತಪ್ರೇತವೇತಾಳವಿಪಿನ ಭಯ । ವೀತಿಹೋತ್ರಗೆ ಶುಭಮಂಗಳಂ ॥ ವಾತಜನಕ ಜಗನ್ನಾಥವಿಠಲನ । ದೂತರಾ ಸಲಹುವ ದಾತನಿಗೆ । ಜಯ ॥ ೩ ॥ ಮಂಗಳಂ ನಿತ್ಯ ಶುಭಮಂಗಳಂ ॥ ಶ್ರೀಃ ॥

ಗ೫೩. ರಾಗ ಭೈರವಿ, ಝಂಪೆತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ಮಂಗಳಂ ಮಹದಾದಿ ತತ್ವತತ್ವೇಶಗೆ । ಮಂಗಳಂ ಸಂಕರ್ಷಣಾತ್ಮಭವಗೆ ॥ ಮಂಗಳಂ ತ್ರಿಜಗನ್ನಿಯಾಮಕ ಸಮೀರನಿಗೆ । ಮಂಗಳಂ ಸುರಸಿದ್ಧಸಾಧ್ಯವರಗೆ ॥ ೧ ॥ ಸಕಲಜೀವೋತ್ತಮಗೆ ಅಕಳಂಕಮಹಿಮಗೆ । ಮಕರಧ್ವಜಾರಿಪ್ರಮುಖ ವಂದ್ಯಗೆ ॥ ಕಕುಭೇಶರೊಳು ನಿಯಾಮಕನಾಗಿ ತತ್ಕಾರ್ಯ । ಪ್ರಕಟಮಾಡುವ ಭಾವಿವಿಖನಸನಿಗೆ ॥ ೨ ॥ ಖೇಟ ಸತ್ಫಣಿವರಲಲಾಟಾಕ್ಷಮುಖ್ಯಗೆ । ಕೀಟವಂಡಿತಪಾದಪೀಠನಿಂಗೆ ॥ ಸಾಟಿಮಾಡದೆ ಕಾಲಕೂಟಪಾನವ ಮಾಡಿ । ಕೋಟ್ಲೆಯೊಳು ಖಳರನು ವಿಪಾಟಿಸಿದಗೆ ॥ ೩ ॥ ಶತಧೃತಿಯವರ ಕಲ್ಪಶತಗಳಲಿ ಪರಮ ಅ । ದ್ಭುತತಪವಗೈದು ಶ್ರೀಪತಿ ಕರುಣದಿ ॥ ಚತುರಮುಖದಿಂದ ಭಾರತಿಸಹಿತ ಜನಿಸಿ ಪಾ । ರ್ವತಿಪತಿಯ

ಪಡದ ನಿರ್ಜಿತಕಾಮಗೆ ॥ ೫ ॥ ಜೀವನಾಮಕ ಶೇಷವಾರುಣಿಯ ಪಡದವಗೆ । ಜೀವನಿಯಾಮಕಗೆ ಜೀವೇಶಗೆ ॥ ದೇವ ದೇವಕಿಸುತಶ್ರೀಜಗನ್ನಾಥವಿಠಲನ್ನ । ಪಾವನಗುಣವ ತುತಿಪ ಪವಮಾನಗೇ ॥ ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ೫ ॥ ಶ್ರೀಃ ॥

## ೧೫೪. ರಾಗ ಕಾಂಬೋಧಿ, ಝಂಪೆತಾಳ.

ಜಯ ಮಂಗಳಂ ನಿತ್ಯ ಶುಭಮಂಗಳಂ । ದಯದಿ ಭಕ್ತರ ಕಾಯ್ವ ದಾಶರಥಿಗೆ ॥ ಜಯ ಮಂಗಳಂ ನಿತ್ಯಶುಭಮಂಗಳಂ ॥ ಪಲ್ಲ ॥ ಅವನಿಜಾವಲ್ಲಭಗೆ ಪವನಾತ್ಮಜನ ಸಖಗೆ । ಪ್ಲವಗನಾಯಕರಾಳ್ದ ರವಿಜನುತಗೆ ॥ ಶಿವನ ವರಪಡದಕ್ಷಕುವರಮುಖರಕ್ಕಸರ । ಭವರ ಮುಖದಲಿ ಸದೆದ ಪ್ರವಿತತನಿಗೆ ॥ ಜಯ ಮಂಗಳಂ ॥ ೧ ॥ ಪಾವಮಾನಿಯ ಪೆಗಲನೇರಿ ಅತಿಹರ್ಷದಲಿ । ರಾವಣಾದ್ಯರ ಸದೆದ ರಘುರಾಮಗೆ ॥ ಭಾವಿಬ್ರಹ್ಮನಿಗೆ ಭಕ್ತಿಯನಿತ್ತು ಮಿಕ್ಕ ಸು । ಗ್ರೀವಾದಿಗಳಿಗೆ ಮುಕ್ತಿಯ ನೀಡ್ದಗೇ ॥ ಜಯ ಮಂಗಳಂ ॥ ೨ ॥ ತ್ರಿಗುಣವರ್ಜಿತ ತ್ರಿವಿಕ್ರಮತೀರ್ಥ ಪಾದನಿಗೆ । ಭೃಗುಕುಲೋದ್ವಹ ಭಕ್ತಜನಪಾಲಗೆ ॥ ಸ್ವಗತನಾಮಗಳ ಸರ್ವರಿಗಿತ್ತು ಸಂತೈಪ । ಅಗಣಿತಮಹಿಮ ಜಗನ್ನಾಥವಿಠ್ಠಲಗೆ ॥ ಜಯ ಮಂಗಳಂ ॥ ೩ ॥ ಶ್ರೀಃ ॥

## ೧೫೫. ರಾಗ ಪೂರ್ವಿ, ಅಟತಾಳ.

ಮಂಗಳ ಭಾರತಿರಮಣನಿಗೆ । ಜಯ । ಮಂಗಳ ನಿಜಭಕ್ತ ಪರಿಪಾಲಗೆ ॥ ಪಲ್ಲ ॥ ಅಂಜನೇ ಕೇಸರಿತನಯಗೆ ಮಂಗಳ । ಕಂಜಾಪ್ತಜನ ಕಾಯ್ದಗೆ ಮಂಗಳ ॥ ಸಂಜೀವನಾದ್ರಿಯ ತಂದಗೆ ಮಂಗಳ । ಸಂಜಯವಂತ ಶ್ರೀಹನುಮಗೆ ಮಂಗಳ ॥ ೧ ॥ ಕುಂತಿಪಾಂಡುಜನಾಗಿ ಕುವಲಯದೊಳು ಬಲ । ವಂತರಾಯರ ತರಿದಗೆ ಮಂಗಳ ॥ ದಂತಿಪುರವ ಬೇಡಿ ಕೊಡದಿರೆ ಕೌರವ । ಸಂತತಿ ಸವರಿದ ಸುಖಪೂರ್ಣಗೆ ॥ ಮಂಗಳ ॥ ೨ ॥ ಮೂರವತಾರವ ಮಾಡ್ದಗೆ ಮಂಗಳ । ಮೂರೇಳು ಮತ

ಮುರಿದಗೆ ಮಂಗಳ ॥ ಕಾರುಣ್ಯನಿಧಿ ಜಗನ್ನಾಥವಿಠಲನ್ನ । ಆರಾಧಿಸಿದ ಮಧ್ವಮುನಿರಾಯಗೆ ॥ ಮಂಗಳ ॥ ೨ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

# ಸುಳಾದಿಗಳು.

## ೧. ವರದ ಸುಳಾದಿ.

### ರಾಗ ಆನಂದಭೈರವಿ.

**ಧ್ರುವತಾಳ** ॥ ವರದ ವರದಶೋಭಿ ವರವರದಾಯಕ । ಪರಮ ಪುರುಷೋತ್ತಮ ಅಮಿತಮಹಿಮಾ । ಶರಣಾಗತರ ಕಲ್ಪತರುವೆ ವಿಮಲಾರುಣಾಂ । ಬುರುಹದಳಲೋಚನಾ ಭವಮೋಚನಾ । ನಿರುಪಮ ನಿರ್ದೋಷನಿಖಿಳನಿಷೇಧಶೇಷ । ಮರಣಜನನರಹಿತ ಲೋಕಮಹಿತಾ । ಶಿರಿಸರಸಿಜಭವವಾಯು ವಾಣಿ ಭಾರತಿ । ಗರುಡಯಿಂದ್ರಾದಿ ದೇವೋತ್ತಂಸಹಂಸಾ । ಸ್ವರತಸ್ವಾತಂತ್ರ ಗುಣಗಣಭರಿತ ಭಾಗ್ಯವಂತ । ನಿರುತಯೆನ್ನಂತರಂಗವಾಸ ಶ್ರೀಶಾ । ಹರಿಯೆ ನೀನಲ್ಲದನ್ಯಾರರಿಯೆ ಯೆಮ್ಮಸಾಕುವ । ಧೊರೆಯೆ ದೂರುವೆಯೆನ್ನಾ ಮೊರೆಯಕೇಳೊ । ಮರಳಿಮರಳಿ ಯೆನ್ನ ದುರುಳವಿಷಯಂಗಳಿ। ಗೆರಗಿಸಿ ಕಂಗೆಡಿಪಾಕರಣಗಳು । ಯಿರುಳೂ ಹಗಲು ನಿನ್ನಪರವಾಗಿರಲು ಬಹು । ದುರಿತಕೋಟಿಗಳಿಗೆ ಅಂಜೆ ನಾನು । ಸುರುಚಿನಾಮಕ ಜಗನ್ನಾಥವಿಠಲ ನಿಜ । ಕರುಣಿ ಕೈಪಿಡಿದುವುದ್ಧರಿಸಬೇಕೊ ॥ ೧ ॥

**ಮಟ್ಟೆತಾಳ** ॥ ಈಶಪೂರ್ಣಕಾಮ ದೋಷರಹಿತ ಸ್ವಪ್ರ । ಕಾಶ ಲಕ್ಷ್ಮಿವಾರಿಜಾಸನ ಮೊದಲಾದ । ಶೇಷದಿವಿಜರಿಂದ ನಿಷೇವಿತನಾ । ದೇಶಕಾಲಗಳಲ್ಲಿ ವಾಸವಾಗಿ ಯಿಪ್ಪ । ವಾಸುದೇವನೆ ನಿನ್ನ ವುಪಾಸನೆ ಮಾಡದಲೆ । ಕ್ಲೇಶಕೆ ಒಳಗಾದೆ ಪಾಶಧರಾರ್ಚ್ಯನೆ । ಘಾಸಿಗೊಳಿಸದೆನ್ನ ಪೋಷಿಸಬೇಕಿನ್ನು । ವಾಸವಾನುಜ ಜಗನ್ನಾಥವಿಠಲ ಲೌಕಿ । ಕಾಸೆ ಬಿಡಿಸಿ ನಿನ್ನ ದಾಸನೆನಿಸಿ ಸಲಹೋ ॥ ೨ ॥

**ತ್ರಿಪುಟತಾಳ** ॥ ಕರ್ಣನಾಮಕನಾಗಿ ಯಿಂದ್ರಿಯಂಗಳ ಮಾನಿ । ಸುರರೊಳು ನೆಲಸಿ ವಿವಿಧ ವಿಷಯಂಗಳನೆ । ರವಿಗಳೊಳಗಿದ್ದು ನಿಸ್ವರೂಪವ ಬಿರದು । ಅರಿಯಗೊಡದಲೆ ವಿಹರಿಸುತಿಪ್ಪೆ । ಗುರುಮಾಡಿ ಜೀವರ ಪುಣ್ಯಪಾಪಂಗಳಿಗೆ । ನಿರಯಸರ್ಗಗಳನೆ ಲೀಲೆಯಿಂದಾ । ಪರಿಪೂರ್ಣಕಾಮಾ ಯೀಪರಿಸಂಸಾರದೊಳಿಮ್ಮಾ । ತಿರಿಗಿಸಿ ನೀ ಕ್ರೀಡೆ ಆಡುತಿಪ್ಪೆ । ವಿರಜನಾಮಕ ಜಗನ್ನಾಥವಿಠಲ ಕರ । ವೆರಡು ಮುಗಿವೆ ಯೆಮ್ಮುದ್ಧರಿಸೊ ಭಾರ ನಿನ್ನದೂ ॥ ೩ ॥

**ಅಟತಾಳ** ॥ ಆಚತುರ್ಮುಖ ರಜತಾಚಲನಿಲಯಾದಿ । ಖೇಚರರಿಗೆ ಮನೊವಾಚಾಮಗೋಚರ । ಪ್ರಾಚೀನ ಕರ್ಮಾಬ್ಧಿವೀಚಿಯೊಳಗೆ ಮುಣು । ಗೀಚಾರಿವರಿವಂಗೆ ಗೊಚರಿಸುವದೆ ವಿ । ರೋಚನಕೋಟಿಮರೀಚಿಪುಂಜನೆ ಭವ । ಮೋಚಕ ನೀನೆಂದು ಸೂಚಿಸಿದರು ಶ್ರೀಮ । ದಾಚಾರ್ಯರಾಯರು ಯೀಚರಾಚರದೊಳು । ನೀಚರಿಗೆ ಕರ ಚಾಚದಂತೆಮಾಡೋ । ಯಾಚಿಸುವೆ ಸವ್ಯ ಸಾಚಿ ವರದ ವಿ । ರೋಚ ಶ್ರೀಜಗನ್ನಾಥವಿಠಲ ನಿನ್ನಾ । ಲೋಚನ ಕೊಡುವದು ಸಾಚರಿಗಳ ಕೂಡಾ ॥ ೪ ॥

**ಆದಿತಾಳ** ॥ ಆನಘಾನೆಂದೊಮ್ಮೆ ನೆನವ । ಮಾನವಭವ । ವನಧಿ ದಾಟುವ ಬಂಧು । ಜನರ ಕೂಡಿಕೊಂಡು । ವಸಿತಾದಿವಿಷಯಗಳನುಭವಿಸುತ ತನ್ನ । ಮನೆಯೊಳಾಗಿರಲಾ ಜೀವನೆವೆಮುಕ್ತಾನು । ಅನಿಮಿಷ ಮುನಿ ಭಾನುತನಯ ಲೋಕದಿ ನಾರಾ । ಯಣ ನೆನೆ ನರಕಸ್ಥಜನರು ಮುಕ್ತರಾಗರೆ । ಘನಮಹಿಮನೆ ನಿನ್ನ ಅನುಸ್ಮೃತಿಯುಳ್ಳವ । ಮನುಜನಾಗಲಿ ಮತ್ತೆ ದನುಜನಾಗಲಿ ತ್ರಿಭು । ವನದೊಳು ಮಾನ್ಯನು ಅನುಮಾನವಿಲ್ಲ ಪ್ರತ । ದರ್ನನನ್ನಾಮ ಜಗನ್ನಾಥವಿಠಲ ಪ್ರಹ್ಲಾದ ವಿರೋ । ಚನ ನರ ವಿಭೀಷಣರಿಗೊಲಿದು ಕಾಯಿದೆ ॥ ೫ ॥

**ಜತೆ** ॥ ಭಕ್ತವತ್ಸಲಾ ಜಗನ್ನಾಥವಿಠಲ ಮುಕ್ತಾ । ಮುಕ್ತನಿಯಾಮಕ ಶಕ್ತನ್ನ ಕೈಪಿಡಿಯೋ ॥ ೬ ॥ ಶ್ರೀಃ ॥

## ೨. ದುರಿತವನಕುಠಾರ ಸುಳಾದಿ.

### ರಾಗ ಮಧ್ಯಮಾವತಿ.

**ಧ್ರುವತಾಳ** ॥ ದುರಿತವನಕುಠಾರಿ ದುರ್ಜನಕುಲವೈರಿ । ಶರಣಾಗತ ವಜ್ರಪಂಜರ ಕುಂಜರ । ವರ ಸಂರಕ್ಷಕ ಜನ್ಮಮರಣರಹಿತ । ಮಹಿತ । ಪರಮ ಕರುಣಾಸಿಂಧು ಭಕ್ತಬಂಧು । ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ । ಹರಿಯೆ ಕ್ಷರಾಕ್ಷರ ಪುರುಷೋತ್ತಮ । ಧುರದೊಳಗರ್ಜುನನ್ನ । ತುರಗ ನಡಿಸಿದ ಸಂ । ಗರ ಭಯಂಕರ ಲೋಕೈಕಧೀರಾ । ಉರುಗಾಯ ವೈಕುಂಠ । ವರಮಂದಿರ ಚಂದಿರ । ತರಣಿಕೋಟಿಸಂಕಾಶ ವಿಮಲಕೇಶ । ಸ್ಮರಣಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ । ಅರಿತೆನು ನೀನಮ್ಮ ಪೊರವದಿನ್ನು । ಸರುವಕಾಮದ ಜಗನ್ನಾಥವಿಠಲಭಕ್ತ । ಪರಿಪಾಲನೆಂಬೊ ಬಿರಿದು ನಿನದಲ್ಲವೇ ॥ ೧ ॥

**ಮಟ್ಟಿತಾಳ** ॥ ವಿಧಿಪಿತ ನೀನಲ್ಲದೆ ನಿಧಿಪತಿಗಳುಂಟೆ । ಸಾಧನನಾಗಿ ಇಪ್ಪೆ ನಿನ್ನದಾಸರಿಗಾಗಿ ಮಧು । ಸೂದನಜಗನ್ನಾಥವಿಠಲರೇಯ । ನಿಧನನೆನಿಸಿಕೊಂಡೆ ನಿನ್ನದ್ವೇಷಿಗಳಿಗೆ ॥ ೨ ॥

**ರೂಪಕತಾಳ** ॥ ಮೂರುಲೋಕದಸ್ವಾಮಿ ಸರ್ವಜ್ಞ ಸುಖಪೂರ್ಣ । ಪ್ರೇರಕ ಸಾಕ್ಷಿಕಾರಣ ಕಾರ್ಯದೋಷವಿ । ದೂರ ಸದ್ಗುಣಸಾಂದ್ರ ಸುಜನಾಂಬುಧಿಚಂದ್ರ । ಭಾರಕರ್ತನು ಜಗಕೆ ನೀನಿರೆ ಯೆಮ್ಮಮನೋ । ಹರ ಸಲಿಸುವದೇನಚ್ಚರಿಯವೋ । ಕ್ರೂರಮಾನವರ ಸಂಹಾರವಮಾಡಿಸು ಗುರು । ಮಾರುತನಿಂದಲಿ ಶೀಘ್ರನಾಗಿ ನಿರೀಕ್ಷಿಸೆಂದು ಪ್ರಾರ್ಥಿಸುವ ಭಕ್ತಗೀ । ಭೂರಿಸಾರಭಾಗ್ಯವನಿತ್ತು ನೀರಕ್ಷಿಸನುದಿನ । ಶೂರ ಜಗನ್ನಾಥವಿಠಲ ನೀನಲ್ಲದಿ । ನ್ನ್ಯಾರು ಭಕ್ತರ ಕ್ಕಾವ ಕಾರುಣ್ಯಗಳು ಜಗದಿ ॥ ೩ ॥

**ಝಂಪೆತಾಳ** ॥ ಪಿತನಿಂದ ನೊಂದ ಪ್ರಹ್ಲಾದನ್ನಕ್ಕಾದಿ ದೇ । ವತೆಗಳಿಗೆ ಬಂದ ಭಯನೀನೆ ಪರಿಹರಿಸಿ ದ್ರೌ । ಪದಿಯ ಮೊರೆಕೇಳಿ ಪಿವ್ಯಾಂಬರವ ಕರುಣಿಸಿದೆ । ಕ್ಷಿತಿಜನಾಲಯದಿ ಬಳಲುವ ಬಾಲೆಯರ ದ್ವಾರಾ । ವರೆಗೆ ಕರದ್ವೊಯ್ದು ವಲಿದವರ ಪೋಷಿಸಿದೆ ಮಾ । ರುತಿಯ ಕರ

ದಿಂದ ಬೃಹದ್ರಥನಕುವರನ ಕೊಲಿಸಿ । ಕ್ಷಿತಿಪರನ ಬಿಡಿಸಿ ಮುದ। ತತಿಯಪಾಲಿಸಿದೆ ಕುರು । ಪೃತನದೊಳು ಪಾಂಡವರ ಗೆಲಿಸಿ ಕೀರ್ತಿಯ ಪಡದೆ। ಶತವೋದನಸ್ತ್ರದಿಂದಲಿ ಗರ್ಭದೊಳಗೆ ಪೀ । ಡಿತನಾದ ಶಿಶು ಪರೀಕ್ಷಿತನ ಸಂತೈಸಿದೆ । ಶಿತಿಕಂಠಗೊಲಿದು ಸಾರಥಿಯಾಗಿ ಮುಪ್ಪು ರದ । ಸತಿಯರನೊಲಿಸಿ ಕೀ । ರುತಿಯಿತ್ತೆ ಭಕತನಿಗೆ । ಮಿತಿಯುಂಟೆ ನಿನ್ನ ಕರುಣಕೆ ದೇವವರಿಯ ಸಾಂ । ಪ್ರತ ಬೇಡಿಕೊಂಬೆ ಬಿನ್ನಪಕೇಳ ಜಸ್ರ ಸಂ । ತುತಿಪ ಭಕ್ತನ ಮನೋ । ರಥವ ಪೂರೈಸು ಸು । ಪ್ರತ ನಾಮ ಶ್ರೀಜಗನ್ನಾಥವಿಠಲ ಭಾಗ । ವತ ಜನಪ್ರಿಯ ನೀನೆ । ಗತಿಯೆ ಮಗೆ ಇಹಪರದಿ ॥ ೪ ॥

ತ್ರಿಪುಟೆತಾಳ ॥ ನೀಸಲಹಲಿನ್ಯಾರು ಬಂದ । ಡ್ಡೈಸುವರು ಮೂ ಲೋಕದೊಳಹೊರ । ಗೀಸಮಸ್ತದಿವೌಕಸರು ನಿನ । ಗೀಸಮರ್ಪಕ ವಾದ ಕಾರ್ಯವು । ಹಾಸುಖದಿ ನಡೆಸುವರು ಲಕ್ಷ್ಮೀ । ದಾಸಿಯೆನಿ ಪಳು ನಿನ್ನ ಮನೆಯಲಿ । ದೇಶಕಾಲಾದಿಗಳು ನಿನಗಾ । ವಾಸಯೋಗ್ಯ ಸ್ಥಾನವೆನಿಪದು । ಈಶಲೋಕತ್ರಯಕೆ ಲೇಸಾ । ಯಾಸವೆಂಬದು ಕಾಣೆನೊ ಕರು । ಣಾಸಮುದ್ರನೆ ವಲಿದುಯೆಮ್ಮಭಿ । ಲಾಷೆಪೂರೈಸೆಂದು ವೇದ । ವ್ಯಾಸಕೀಟಗೆ ವಲಿದು ಮಹಸಿಂ । ಹಾಸನವನೇರಿಸಿ ಮೆರಸಿದೆ ಪ । ರಾಶರಾತ್ಮಜ ನಿನ್ನ ಬಣ್ಣಿಸೆ । ನಾ ಸಮರ್ಥನೆ ಯೆಂದಿಗಾದರು । ನೀಸುಲಭನೆಂದರಿದು ನಾ ಬಿ । ನ್ನೈಸಿದೆನು ಈರೀತಿಯಲಿ ಸ । ರ್ವಾ ಸುನಿಲಯ ಜಗನ್ನಾಥವಿಠಲ । ಯೇಸುಮಾತುಗಳ್ಯಾಕೆ ಮನ್ಮನ । ದಾಷೆ ಪೂರ್ತಿಯಮಾಡಿ ಯೆಮ್ಮನು । ದಾಸಿಸದೆ ದಯದಿಂದ ನೋಳ್ಪದು ॥ ೫ ॥

ಅಟತಾಳ ॥ ನಿಗಮತತತಿಗಳಿಗೆ ವೇದ್ಯವಾದ ನಿನ್ನ । ಅಗಣಿತ ಮಹಿಮೆ ಲಕುಮಿಬೊಮ್ಮ ಭವಾ । ದಿಗಳು ತಾನರಿಯಲು ಸಾಕಲ್ಯ ಮಂದಜೀ । ವಿಗಳಿಗೆ ಗೋಚರಿಸುವದೆ ನಿನ್ನರೂಪ । ಭಗವಂತ ನೀನೆ ದಯಾಳು ಯೆಂದರಿದು ನಾ । ಪೊಗಳಿದೆನೊ ಯಥಾಮತಿಯೊಳಗೆ ಲೇಶಾ । ಬಗೆಯರಿದೆನ್ನಪರಾಧಕೋಟಿಗಳು । ಜಗತಿಪತಿ ತನ್ನ ಮಗು ವಿನ ತೊದಲವಾ । ತುಗಳನು ಕೇಳುತ । ನಗುತಲಿ ಕಾವಂತೆ । ಬಗೆಬಗೆ

ಯಿಂದ ಪೂರ್ತಿಸಿ ಮಿಗೆಹರುಷದಿ । ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ । ತೆಗದು ಬಿಸುಟ್ಟು ಮತ್ತೆ ಹಗೆಗೊಂಬನೇಸೋ ಶ್ರೀ । ಯುಗನೆ ಬಿಡದೆ ಪಾಡಿಪೊಗಳುವ ದಾಸಗೆ । ಬಗೆಬಡತನವ್ಯಾಕೆ ಜಗತಿಪಾಲಯದಿ ನಾ । ಲ್ಮೊಗನಯ್ಯ ಅರ್ಥಕಾಮಗಳೊಳಗಿಪ್ಪ ಈ । ವರ್ಗೆ ...ವಿಂದಾಗಿ ಆವಾದಸಾಧ್ಯವೋ । ಗಗನಭೂಮಿ ಪಾತಾಳ ವ್ಯಾಪ್ತರೂಪನೆ ಕರ । ಮುಗಿವೆ ಗೋಚರಿಸೆಮ್ಮ ದೃಗಯುಗ ಪ್ರವರ್ತಕ । ಜಗನ್ನಾಥವಿಠಲ ನರ । ಮೃಗನಾಗಿ ಸ್ತಂಭದಿಂ ದೊಗೆದುಬಂದೊದಗಿದೆ ॥ ೬ ॥

ಏಕತಾಳ ॥ ಶ್ರೀನಿಧೆ ಪ್ರತಿದೇಹಗಳಲ್ಲಿ ಗತಿ । ನೀನಲ್ಲದೆ ಯೆನ । ಗಾನಿಹಪರದಲ್ಲಿ । ಆ ನಳಿನಭವಾದ್ಯನಿಮಿಷರ ಸಿ । ಜ್ಞಾನರಿದವ ತತು ಸುಖಗಳ ಕೊಡುವ ಮ । ಹಾನುಭಾವ ಯೆಮ್ಮಭಿಮತ ಸಲಿಸುವ । ದೇನಚ್ಚರಿ ನಿನ್ನರಸಿ ಲಕುಮಿ ಕಡೆ । ಗಾಣಳು ಪರಮೈಶ್ವರ್ಯ ಪ್ರಾಂತಜಿ । ದಾನಂದಮಯನೆ ಪ್ರಣತರಧಿಕಾ । ಠಾನುಸಾರ ಸುಖ । ಪಾನಿಧಿಯೊಳು ಲೋಲಾಡುತಿಹೆ । ದಾನಿಗಳರಸೆ ಮನಾದಿಕರಣಾಭಿ । ಮಾನಿಗಳಿಗೊಡೆಯ । ತಾನೆನಿಸುವ ಮುಖ್ಯ । ಪ್ರಾಣಪತಿಯೆ ನೀ । ತಾನವಿಜ್ಞಾಪನ । ವೇನುಂಟಿನ್ನನುದಿನದಿಮಾಳ್ಪುದು । ಮಾನದಗುರು ಜಗನ್ನಾಥವಿಠಲ ಕರು । ಣಾನಿಧಿ ಸರ್ವದ ಸುಲಭನೀನಲ್ಲವೇ ॥ ೭ ॥

ಜತೆ ॥ ಚಟುಲಕಾರ್ಯಗಳ ಸಂ । ಘಟನೆಮಾಡಿಸುವೆ । ನಿರ್ಘಟಲ ಜಗನ್ನಾಥ । ವಿಠಲ ದೇವೋತ್ತಮ ॥ ೮ ॥

## ೩. ಶುಭದಸುಂದರಕಾಯ ಸುಳಾದಿ.

ಧ್ರುವತಾಳ ॥ ಶುಭದಸುಂದರಕಾಯ । ವಿಬುಧ ಸನ್ಮುನಿಗೇಯ । ಅಬುಜಜಾಂಡೋದರ ನಿರ್ವಿಕಾರ । ತ್ರಿಭುವನಾತ್ಮಭವನ ತ್ರಿಗುಣಾತೀತಾನಿತ್ಯ ದು । ರ್ಲಭದುರ್ವಿಭಾವ್ಯ ದೂರೀಕೃತದುರಿತ । ನಭಗ ವರವಾಹನ್ನ ನಳಿನಲೋಚನ ಚೆನ್ನ । ಇಭರಾಜವರದ ಇಂದಿರೆ ಅರಸಾ । ಉಭಯಸ್ಥಾನದಿವ್ಯಾಪ್ತ ತತ್ತದ್ದೋಷನಿರ್ಲಿಪ್ತ । ಸಭೆಯೊಳು ದ್ರೌಪದಿಯ

ಕ್ಕೈದಕರುಣಿ। ನಿಬಿಡ ಕರ್ಮಪಂಕದಿ ಶಿಗಿಬಿದ್ದು ಬನ್ನಬಡುವ। ಅಬಲರನುದ್ಧರಿಸುವ ಅಬುಧಿಶಯ್ಯ। ಸುಬುಜನಾಮಕ ಜಗನ್ನಾಥವಿಠ್ಠಲ ನಿನ। ಗಭಿಷಂದಿಸುವೆ ಯೆನ। ಗಭಯವಿತ್ತು ಸಲಹೋ॥ ೧॥

ಮಟ್ಟಿತಾಳ॥ ಪ್ರತಿಪ್ರತಿಕಲ್ಪಸ್ಥ। ಪ್ರತಿಪ್ರತಿಜೀವರಿಗೆ। ಪ್ರತಿಪ್ರತಿಯುಗದಲ್ಲಿ। ಪ್ರತಿಪ್ರತಿದೇಹಕ್ಕೆ॥ [illegible]। ಚಿತ್ರಪ್ಪಲುಗೊಡದೆ। ಪಿತಜನನಿಭ್ರಾತ। ಸತಿಸುತ ಮುಂತಾದ। ಇತರ ಜನರೊಳಿದ್ದು। ಹಿತವನೆಪುಟ್ಟಿಸಿ। ಪೋಷ್ಯಪೋಷಕನೆನಿಸಿ। ಪ್ರತತಿ ಜಾಂಡವಪೊರವೆ। ನಿವ್ಯಾರ್ಜದಿ ನಿರುತ। ಪತಿತಪಾವನ ಜಗ। ನ್ನಾಥವಿಠಲ ನಿನ್ನಾ। ದ್ಭುತಮಹಿಮೆಯ ತಿಳಿಯೆ। ಶತಮೋದನಿಗೊಶವೇ॥ ೨॥

ತ್ರಿಪುಟಿತಾಳ॥ ಕಂಥಪಟಗಳಿಗೆ। ತಂತುಜೋಡಿಸಿದಂತೆ। ಪಿಂತೆಮಾಡಿದಕರ್ಮ। ತಂತುಗಳಿಂದಲಿ॥ ಅಂತವಿಲ್ಲದೆ ಜೀವ। ತಿಂತಿಣಿಗಳಕಟ್ಟಿ। ಸಂತೆನೆರಹಿ ಜನರ। ಅಂತರಂಗದಿ ನೆಲಸಿ॥ ಕಾಂತೆರೊಡನೆ ರಮಿಸಿ। ಸಂತೋಷಗಳನೀವೆ। ಸಂತರಿಗೆ ಸರ್ವಕಾಲದಲಿ। ಎಂತೆಂತು ಸೇವಿಪ॥ ಜಂತುಗಳಿಗೆ ಗತಿ। ಪ್ರಾಂತಕ್ಕೆಕೊಡುವೆ ಶ್ರೀ। ಕಾಂತ ನೀನು। ಇಂಥ ವ್ಯಾಪಾರ ನೀಮಾಡುತ ಇರಲಾಗಿ॥ ಚಿಂತೆಬಡುವದ್ಯಾಕೆ ಜೀವರಿಗೆ। ಹೊಂತಕಾರಿ ಜಗನ್ನಾಥವಿಠಲ ವಿಧಿ। ಕಂತುಹರಾದ್ಯರ। ಸ್ವಾಂತಕೆ ನಿಲುಕೆ॥ ೩॥

ಅಟಿತಾಳ॥ ಆರಿಗೆ ಚಿಂತಿಸಲಾರಗೋಸುಗಪೋಗಿ। ಆರಿಗಾಲ್ಪರಿಯಲು। ಆರೆನ್ನ ಸಲಹುವ॥ ಯಾರ್ರೆನಗೆ ನಾ। ನ್ಯಾರೋ ಜೀವರಿಗೆ ಸ। ರೋರುಹಭವನ ಸು। ಚಾರುಸೃಷ್ಟಿಯೊಳಗೆ॥ ದಾರುಕ ನಾನೋರ್ವ। ಭಾರಕರ್ತನು ನೀನೆ। ಈರೇಳುಭುವನ ವ್ಯಾ। ಪಾರಮಾಡುವ ಸರ್ವ॥ ಧಾರಾನೀನಿರೆ ಬಡಿ। ವಾರವ್ಯಾಕೆನಗೆ ರ। ಮಾರಮಣನೆ ಜಗನ್ನಾಥವಿಠಲ ಪರಿ॥ ವಾರ ನಿನ್ನದು ಕಾಯೋ। ಕಾರುಣ್ಯನಿಧಿ ಬೇಗಾ॥ ೪॥

ಆದಿತಾಳ॥ ಯೇಸೇಸುಕಲ್ಪದಲ್ಲಿ ಶಿಸ್ವತ್ವಾದಿಜಗತ್ತು। ಈಶಾವಾಸ್ಯವೆಂದು। ಭೂಸುರೋತ್ತಮರು ಪೇಳ್ವ। ರೈಸೆ ಅನ್ಯೆಥಾಲುಂಟೆ।

ವಾಸುದೇವನೆ ಜೀವ । ರಾಶಿಗಳೊಳಗಿದ್ದು । ದೋಷಫಲಗಳಣಿಸ ॥ ಲೋಸುಗ ಸ್ಥೂಲದೇಹ । ನೀ ಸಂಬಂಧಿಸಿ ಹೃದಯಾ । ಕಾಶದೊಳು ನೀನಿದ್ದು । ಕ್ಲೇಶಸುಖಗಳೀವೆ ॥ ನೀ ಸ್ವತಂತ್ರನಾಗಿ ಅಜಭವ ಸುರಾದಿ ಗಳಾ । ಯಾಸವಿಲ್ಲದೆ ಪೊರವ । ಶಾಶ್ವತ ಮೂರುತಿ । ವಾಸವನುತ ಜಗ ನ್ನಾಥವಿಠಲ ನಿನ್ನ । ದಾಸಾನ ಅಪರಾಧ । ಲೇಶನೋಡದೆ ಕಾಯೋ ॥ ೫ ॥

ಜತೆ ॥ ಅನಂತಜೀವರು ನಿನ್ನಧೀನ ಶ್ರೀಜ । ಗನ್ನಾಥವಿಠಲ ಪ್ರಪನ್ನವತ್ಸಲ ನೀನು ॥ ೬ ॥ ಶ್ರೀಃ ॥

ಗುರ್ವಂತರ್ಗತ

॥ ಶ್ರೀಮಧ್ವೇಶಾರ್ಪಣಮಸ್ತು ॥

## ಶ್ರೀಜಗನ್ನಾಥದಾಸರಕೀರ್ತನೆಗಳ ೧ನೇ ಭಾಗವು

## ಸಂಪೂರ್ಣವು.

॥ ಶ್ರೀಕೃಷ್ಣಾರ್ಪಣಮಸ್ತು ॥



ಈ ಪುಸ್ತಕವು ಪಾವಂಜೆ ಗುರುರಾವ್, ಇವರ ಉಡುಪಿ ಶ್ರೀಕೃಷ್ಣಮುದ್ರಾಲಯದಲ್ಲಿ ಮುದ್ರಿಸಲ್ಪಟ್ಟು, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು. ಶಾ. ಶಕ. ೧೮೪೮. 1926.